Kannada-gādegaḷu

# ಕಂನಡ ಗಾದೆಗಳು.

ಮೂರನೇ ಛಾಪೆ.



ಮಂಗಳೂರು:
ಜರ್ಮನ್ ಮಿಶ್ಯನ್ ಪ್ರೆಸ್.
೧೮೫೯.
1859.

# ಗಾದೆಗಳು.

---

ಅಆ ಬಾರದಿದ್ದರೆ ಅಮರವಾದರೂ ಹೇಳು.

೨ ಅಂಕಣದ ಮನೆಯಾದರೆ ಕೊಂಕಣಿಗನಿಗೆ ಆಗದೇ.

೩ ಅಂಕೆ ಇಲ್ಲದ ಕಪಿ ಲಂಕೇ ಸುಟ್ಟಿತು.

೪ ಅಂಕೆ ತಿಳಿಯದವ ಮಂಕಗಿಂತ ಕಡೆ.

೫ ಅಂಗಡಿ ಇದ್ದರೆ ಸಾಲದು, ಮುಂಗಡ ಬೇಕು.

೬ ಅಂಗಡೀ ಮಾರಿ ಗೊಂಗಡೀ ಹೊದ್ದ.

೭ ಅಂಗಡಿಯಲ್ಲಿ ಜುಂಗಡಿ ಶಿಕ್ಕದೇ.

೮ ಅಂಗನೆ ಬರುವಾಗ ಅಂಗೀ ತೊಡ ಬೇಡವೇ.

೯ ಅಂಗರಕ್ಷೆ ಇಲ್ಲದವನಿಗೆ ಭಂಗಾರವ್ಯಾಕೆ.

೧೦ ಅಂಗಲಾಗಿ ಬಿತ್ತಿದ್ದು ಅಗಲವಾಗಿ ಯೇಳುವದು.

೧೧ ಅಂಗವಸ್ತ್ರ ಇಲ್ಲದಿದ್ದರೆ ಅಂಗಾರವಿರ ಬಾರದೇ.

೧೨ ಅಂಗಳದಲ್ಲಿ ಹೇತು ಮಂಗಳ ಕಷ್ಟ.

೧೩ ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗ ಬಹುದು.

೧೪ ಅಂಗೀ ಕೊಟ್ಟು ಭಂಗಿಸೇದಿ ಮಂಗನಾದ.

೧೫ ಅಂಗಿಗೆ ಇಲ್ಲದಿದ್ದರೆ ನುಂಗಲಿಕ್ಕೆ ಬೇಡವೇ.

೧೬ ಅಂಗುಷ್ಟ ಬಾತರೆ ಪರ್ವತವಾದೀತೇ.

೧೭ ಅಂಗೈ ತೋರಿಸಿ ಅವಲಕ್ಷಣ ಅನ್ನಿಸಿ ಕೊಂಡ.

೧೮ ಅಂಗೈ ಹುಣ್ಣಿಗೆ ಕನ್ನಡಿ ಯಾಕೆ.

೧೯ ಅಂಜಿನಲ್ಲಿ ಹೋದರೆ ಮಿಂಚಿನ ಭಯ ತಪ್ಪೀತೇ.

೨೦ ಅಂಚು ಇಲ್ಲದ ಹೊಲವಿಲ್ಲ, ಸಂಚು ಇಲ್ಲದ ಮಾತು ಇಲ್ಲ.

೨೧ ಅಂಚೇ ಕಾಗದ ಮುಂಚೇ ಬಂದರೆ ಲಂಚ ಯಾಕೆ.

೨೨ ಅಂಜನಕ್ಕೆ ಅಂಜ ಬೇಡ, ಮುಂಜಾನೆಗೆ ಆಡ ಬೇಡ.

೨೩ ಅಂಜಿದವನ ಮೇಲೆ ಕಪ್ಪೆ ಹಾಕಿದ ಹಾಗೆ.

೨೪ ಅಂಟವಾಳದ ಕಾಯಿಗೆ ಬಂಟವಾಳಕ್ಕೆ ಹೋಗ ಬೇಕೇ.

೨೫ ಅಂಟು ತಪ್ಪಿದರೆ ನಂಟು ತಪ್ಪೀತೇ.

೨೬ ಅಂಡೇಬಾಯಿ ಕಟ್ಟಿ ಬಹುದು, ಮುಂಡೇ ಬಾಯಿ ಕಟ್ಟ ಕೂಡದು.

೨೭ ಅಂಡೇಯೊಳಗಣ ನೀರು ಮುಂಡೇ ಕೈಯೊಳಗಣ ಹಣ ಸಮ.

೨೮ ಅಂತಕನ ಶಿಕ್ಷೆಗೆ ಹೆದರೆ ಸಂತೆಗೋವಿಂದನ ಸಾಲಕ್ಕೆ ಹೆದರುತ್ತೇನೆ.

೨೯ ಅಂತೂ ಇಂತೂ ಕುಂತಿ ಮಕ್ಕಳಿಗೆ ರಾಜ್ಯವಿಲ್ಲ.

೩೦ ಅಂತೇ ಬಂತು, ಉಂತೇ ಹೋಯಿತು.

೩೧ ಅಂತ್ಯಜನಲ್ಲಿ ಹೋಗಿ ಮೆಂತ್ಯ ಕದ್ದ ಹಾಗೆ.

೩೨ ಅಂತ್ಯವಿಲ್ಲದ ಕಡೆಯಿಲ್ಲ, ಆದಿ ಇಲ್ಲದ ಆರಂಭವಿಲ್ಲ.

೩೩ ಅಂದ ಥಂದ ನೋಡಿದರೆ ಮುಂದತ್ವ ಹೋಗುವದೇ.

೩೪ ಅಂದನ್ನಿಸಿ ಕೊಂಬ ಅಂದಗೇಡಿಯ ಮನೆ ಯೆಲ್ಲಿ.

೩೫ ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ.

೩೬ ಅಂದು ಬಾ ಅಂದರೆ ಮಿಂದು ಬಂದ.

೩೭ ಅಂಧಕನಿಗೆ ಕತ್ತಲೆ ಇಲ್ಲ, ಮಂದಭಾಗ್ಯನಿಗೆ ದರಿದ್ರವಿಲ್ಲ.

೩೮ ಅಂಬಲೀ ಕುಡಿಯುವವನಿಗೆ ಮೀಸೇ ತಿಕ್ಕುವವನೊಬ್ಬ.

೩೯ ಅಂಬಲಿಗೆ ಗತಿ ಇಲ್ಲದವನಿಗೆ ಹಂಬಲಿಸುವದು ಯಾಕೆ.

೪೦ ಅಂಬಲೀಲಿ ಕಂಡೆಯಾ ತೋಣಚಿ ನಾಯಿಯನ್ನ

೪೧ ಅಂಬಾರಿಯಲ್ಲಿ ಕೂತರೂ ಮುಂಗಾರು ಬಿಡಲಿಲ್ಲ.





೪೨ ಅಂಬು ತಾಗಿದರೂ ಹಂಬಲು ಬಿಡಲಿಲ್ಲ. [ತಿಳಿಯದೇ.
೪೩ ಅಂಬು ಬಿಡಲಿಕ್ಕೆ ತಿಳಿಯದೇ ಇದ್ದರೆ ಚಂಬು ಮುಣುಗಿಸಲಿಕ್ಕೆ
೪೪ ಅಂಬೆಗಾಲು ಹಾಕಿದರೆ ರಂಬೆ ಸಿಕ್ಕ್ಯಾಳೇ.
೪೫ ಅಕ್ಕ ತಂಗಿಯರದಾದಾಗ್ಯೂ ಅಕ್ಕಸಾಲೆ ಬಿಡನು.
೪೬ ಅಕ್ಕ ನನ್ನವಳಾದರೆ ಭಾವ ನನ್ನವನೇ.
೪೭ ಅಕ್ಕನ ಶಾಲೆ ಭಾವನ ಕತಾರಿ.
೪೮ ಅಕ್ಕನ ಹಗೆ, ಭಾವನ ನಂಟು.
೪೯ ಅಕ್ಕರದ ಅಕ್ಕ ಬಂದಾಗ್ಯೆ ಸಕ್ಕರೆ ಯೆಲ್ಲಾ ಕಹಿಯಾಯಿತು.
೫೦ ಅಕ್ಕಸಾಲೆಗಿಂತ ಕಳ್ಳನಿಲ್ಲ, ಮಕ್ಕಿಗದ್ದೆಗಿಂತ ಬೆಳೆ ಇಲ್ಲ.
೫೧ ಅಕ್ಕೀ ಕೊಟ್ಟು ಅಕ್ಕನ ಮನೆಯೇ.
೫೨ ಅಕ್ಕೀಮೇಗಳ ಆಶೆ ನಂಟರಮೇಗಳ ಬಯಿಕೆ.
೫೩ ಅಕ್ಕಿ ಸರಿಯಾಗ ಬಾರದು ಅಕ್ಕನ ಮಕ್ಕಳು ಬಡವಾಗ ಬಾರದು.
೫೪ ಅಕ್ಕ್ಯೂ ಅಂಬೊಕ್ಕ್ಯೂ ಆಗ, ಆಗಾ ಅಂಬೊಕ್ಕ್ಯೂ ಆಗ.
೫೫ ಅಗಲವಾದದ್ದು ಹರಿಯುವದು, ಉದ್ದವಾದದ್ದು ಮುರಿಯುವದು.
೫೬ ಅಗಲಿಸಿದಷ್ಟು ಬಗಲಿಗೆ ಬರುತ್ತದೆ.
೫೭ ಅಗಸನ ಕವಾ ಹೊರಗೆ ತೆಗದ ಮೇಲೆ ಗುಟ್ಟು ಸಿಕ್ಕೀತು.
೫೮ ಅಗಸನಲ್ಲಿ ಬೊಗಸೆ ನೀರು ಸಿಕ್ಕದೇ. [ಹಾಗೆ.
೫೯ ಅಗಸರ ಕತ್ತೇ ಕೊಂಡು ಹೋಗಿ ಡೊಂಬರಿಗೆ ತ್ಯಾಗಾ ಹಾಕಿದ
೬೦ ಅಗಸಾಲೆ ಕಿವೀ ಚುಚ್ಚಿದರೆ ನೋವು ಇಲ್ಲ.
೬೧ ಅಗುಳು ನುಂಗಲಿಕ್ಕೆ ತೀರದವನ ಬಾಯಲ್ಲಿ ಕಡಬು ಹೆಟ್ಟಿದ.
೬೨ ಅಗ್ರಸಾಲೆ ಊಟ, ಚಂದ್ರಸಾಲೆ ನಿದ್ರೆ.
೬೩ ಅಚ್ಚುಕಟ್ಟಾದ ಕೆಲಸ ಚಂದ, ಬಂದಕಟ್ಟು ಆದ ಊಟ ಚಂದ.
೬೪ ಅಚ್ಚರಿಯಿಂದ ಗಿಳೀ ಸಾಕಿ ಕಿಚ್ಚಿಗೆ ದೊಬ್ಬ್ಯಾರೋ,
೬೫ ಅಚ್ಚಿನ ಮನುಷ್ಯಗೆ ನುಚ್ಚಿನ ಅನ್ನ.

೧೬ ಅಚ್ಚು ಬೆಲ್ಲ ಅಚ್ಚಪ್ಪಗೆ, ನುಚ್ಚು ಗಂಜಿ ವೆಂಕಪ್ಪಗೆ.

೧೭ ಅಜ್ಜಗೆ ಮೊಮ್ಮಗ ಆಕಳಿಕೆ ಕಲಿಸಿದನಂತೆ.

೧೮ ಅಜ್ಜ ಊರಿದ್ದು, ಮೊಮ್ಮಗ ಹಾರಿದ್ದು, ಜೋಡು ಬಾರದು.

೧೯ ಅಜ್ಜಾ ಮದುವೆಯೆಂದರೆ ಯೆನಗೋ ಅಂದ.

೨೦ ಅಜ್ಜಿಗೆ ಅರಿವೇ ಚಿಂತೆ, ಮಗಳಿಗೆ ಮಿಂಡನ ಚಿಂತೆ.

೨೧ ಅಜ್ಜಿ ನೂತದ್ದೆಲ್ಲಾ ಅಜ್ಜನ ಉಡದಾರಕ್ಕೆ ಸರಿ.

೨೨ ಅಜ್ಜಿಯ ಮನೆಗೆ ಅಜ್ಜ ಬಂದ ಹಾಗಾಯ್ತು.

೨೩ ಅಜ್ಜಿ ಸಾಕಿದ ಮಗು ಬೊಜ್ಜಕ್ಕೂ ಬಾರದು.

೨೪ ಅಜ್ಜನ ಬುದ್ಧಿ ಮೊಗ್ಗಿನ ಹಾಗೆ, ಪ್ರಾಜ್ಞನ ಬುದ್ಧಿ ಫಲದ ಹಾಗೆ.

೨೫ ಅಜ್ಞಾತವಾಸದಲ್ಲಿಯೂ ಅಜ್ಞಾನಿಗಳ ಕಾಟ ತಪ್ಪಲಿಲ್ಲ.

೨೬ ಅಟ್ಟಕೂಳಿಗಿಂತ ತಿರಿದಕೂಳು ಲೇಸು.

೨೭ ಅಟ್ಟಕ್ಕೆ ಹಾರದ ಬಡ್ಡಿ ಆಕಾಶಕ್ಕೆ ಹಾರ್‍ಯಾಳೇ. [ವುದವ.

೨೮ ಅಟ್ಟದ ಮೇಲೆ ಅಂಬು, ಬೆಟ್ಟದ ಮೇಲೆ ಬಿಲ್ಲು, ಕುಟ್ಟಿಲಾ ಮೂಗಾ

೨೯ ಅಟ್ಟದಿಂದ ಬಿದ್ದವನ ದಡಿಯಿಂದ ಚಚ್ಚಿದರು.

೩೦ ಅಟ್ಟಪಾಯಸದಲ್ಲಿ ಕೆರಾ ಹೆಟ್ಟಿದ ಹಾಗೆ.

೩೧ ಅಟ್ಟ ಮೇಲೆ ವೊಲೆ ಉರೀತು, ಕೆಟ್ಟ ಮೇಲೆ ಬುದ್ಧಿ ಬಂತು.

೩೨ ಅಟ್ಟ ಸ್ವರ್ಗವಲ್ಲ, ಘಟ್ಟ ಮೇರುವಲ್ಲ.

೩೩ ಅಟ್ಟಿಕ್ಕಿದವರಿಗಿಂತ ಆರಿಸಿ ಕೊಂಡು ಉಣ್ಣು ಯೆಂದವರು ಹಿತವರು.

೩೪ ಅಟ್ಟಿಕ್ಕುವವನಿಗೆ ಹೆಂಡತಿಯಾಗ ಬೇಡ, ಮೊಟ್ಟೆ ಹೊರುವವನಿಗೆ ಆಳಾಗ ಬೇಡ.

೩೫ ಅಟ್ಟು ಅಟ್ಟು ಪ್ರಾಣ ಹೋದರೂ ಹೊಟ್ಟೇ ಹಸಿವು ನಿಲ್ಲಲೇ ಇಲ್ಲ.

೩೬ ಅಟ್ಟುಂಬೋದಕ್ಕಿಂತ ತಿರಿದುಂಬೋದೇ ಲೇಸು.

೩೭ ಅಟ್ಟುಂಬೋದು ಆರು ಕೋಟಲೆ, ತಿರಿದುಂಬೋದು ಪರಮ ಸುಖ.

೩೮ ಅಟ್ಟೇ ಕೆರವಂ ಮೆಟ್ಟಲು ಅಶ್ವವೇರಿದ ಹಾಗಾಯ್ತು.

೮೯ ಅಟ್ಟೀ ಇಲ್ಲವೆಂದರೆ ಕೊಟ್ಟಿಗೇಲಿ ತಂದಿಕ್ಕು.
೯೦ ಅಡ ಅಡಾ ಯೆಂಬವನ ಅಡವಿಯಲ್ಲಿ ನೀಗು.
೯೧ ಅಡವಿಗೆ ಹೋದರೂ ಚಿಗಟದ ಕಾಟ ತಪ್ಪದು.
೯೨ ಅಡವೀಲಿದ್ದವರಿಗೆ ಗಿಡಗಳ್ಳೇ ಆಧಾರ.
೯೩ ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು.
೯೪ ಅಡಿಕೇ ಉಡಿಯಲ್ಲಿ ಹಾಕ ಬಹುದು, ಮರವಾದ ಮೇಲೆ ಕೂಡದು.
೯೫ ಅಡಿಗೇಗುಣ ಸಾರಿನಲ್ಲಿ ನೋಡು, ಮಡಿಗೇ ಗುಣ ಫಲದಲ್ಲಿ ನೋಡು.
೯೬ ಅಡಿಗೇ ಬಿದ್ದರೂ ಮೂಗು ಮೇಲೆ.
೯೭ ಅಡೀಲಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ.
೯೮ ಅಡುಗೂಲಜ್ಜೀ ಮನೆಯಲ್ಲಿ ಅಟ್ಟಡಿಗೆ ಆಯತವಾಗಿರುವದು.
೯೯ ಅಡ್ಡ ಗೋಡೆಯ ಮೇಲಣ ದೀಪದ ಹಾಗೆ. [ಉಂಡು ತೀರುವದು.
೧೦೦ ಅಡ್ಡೀ ಮಾಡಿದಷ್ಟೂ ಬಡ್ಡಿ ಹೆಚ್ಚುವದು, ಅಡಿಗೇ ಮಾಡಿದಷ್ಟೂ
೧೦೧ ಅಣಕವಾದ ಕೆರೆ ಅನೇಕ ನೀರು ಕೊಳ್ಳುವದು.
೧೦೨ ಅಣಜಾಣೆ ಅಣಜಾಣೆ ಅಕಳಿಗೆಷ್ಟು ಮೊಳೆ.
೧೦೩ ಅಣು ಹೋಗಿ ಪರ್ವತವಾದರೂ ಋಣಪಾತಕ ಬೆನ್ನು ಬಿಡದು.
೧೦೪ ಅಣ್ಣಗೆ ಸುಣ್ಣವಿಲ್ಲ, ಯೆತ್ತಿಗೆ ಹುಲ್ಲು ಇಲ್ಲ.
೧೦೫ ಅಣ್ಣಗೆ ಹೆಣ್ಣು ಮಾತಾಡಿದ ಹಾಗೆ.
೧೦೬ ಅಣ್ಣ ತನ್ನವನಾದರೆ ಅತ್ತಿಗೆ ತನ್ನವಳೇ.
೧೦೭ ಅಣ್ಣ ತಂಮ್ಮಂದಿರಾದರೂ ಹಣ್ಣು ಹಂಚಿ ಉಣ್ಣುತ್ತಾರೆ.
೧೦೮ ಅಣ್ಣ ದೊಡ್ಡವನಾದರೂ ಪುಣ್ಯವಿಲ್ಲದೆ ಉಣ್ಣ ಕೂಡದು.
೧೦೯ ಅಣ್ಣಪ್ಪ ಊರಿನಲ್ಲಿದ್ದರೂ ಸರಿ, ದಂಡಿನಲ್ಲಿದ್ದರೂ ಸರಿ.
೧೧೦ ಅಣ್ಣ ಮಣ್ಣು ಮಾಡಿದ, ತಮ್ಮ ರೊಕ್ಕಾ ಮಾಡಿದ.
೧೧೧ ಅತಿಆಶೆಯಿಂದ ಆದದ್ದೂ ಹೋಯಿತು.
೧೧೨ ಅತಿರಥನಾದರೂ ಗತಿಗೆಡ ಬಾರದು.

೧೧೩ ಅತಿಸ್ನೇಹ ಗತೀ ಕೆಡಿಸೀತು.

೧೧೪ ಅತ್ತ ಗಂಡಗಲ್ಲ ಇತ್ತ ಮಿಂಡಗಲ್ಲ.

೧೧೫ ಅತ್ತಿತ್ತಲ ಮಾರಿ ಬಂದು ಅತ್ತೆಯ ಬಡು ಕೊಂಡು ಹೋಗಲಿ.

೧೧೬ ಅತ್ತೀಹಣ್ಣು ಅಚ್ಚ ಕೆಂಪಾದರೂ ವೊಳಗೆ ನೋಡಿದರೆ ಹುರುಳಿಲ್ಲ.

೧೧೭ ಅತ್ತೆ ಕಲಿಸಿದ್ದೇ ಕೆಲಸ, ಗಂಡ ಕಲಿಸಿದ್ದೇ ಹಾದರ.

೧೧೮ ಅತ್ತೆಗೆ ವೊಂದು ಮಾತು, ಸೊಸೆಗೆ ಪ್ರಾಣಸಂಕಟ.

೧೧೯ ಅತ್ತೆಯ ತುರುಬು ಮಾವಗೆ ದಾನ.

೧೨೦ ಅತ್ತೆಯೊಡದ ಪಾತ್ರೆಗೆ ಬೆಲೆ ಇಲ್ಲ.

೧೨೧ ಅರ್ಥಿಗೆ ಬಳ್ಳೇತೊಟ್ಟು ಕೈಕೊಡಹಿದರೆ ಹೋಗುವದೋ.

೧೨೨ ಅದಕ್ಕದು ಉಳಿಕೊಡತಿಯ ನ್ಯಾಯ.

೧೨೩ ಅಧಿಕ ಮಾಸ ಬರಗಾಲದಲ್ಲಿ ಬಂದ ಹಾಗೆ.

೧೨೪ ಅಧ್ವಾನ ಕಾಲದಲ್ಲಿ ಮಧ್ಯಾನ್ನದ ಊಟವೋ.

೧೨೫ ಅನಂತೈಯ್ಯನ ಮಾತ್ರೆ ವೈಕುಂಟಯಾತ್ರೆ.

೧೨೬ ಅನ್ನದಾನಕ್ಕೆ ಸಮಾನವಿಲ್ಲ, ಬನ್ನಬಡುವದು ತಪ್ಪುವದಿಲ್ಲ.

೧೨೭ ಅನ್ಯಾಯದಲ್ಲಿ ಸಂಪಾದಿಸಿದ್ದು ಅಷಡ್ಡಾಳಾಗಿ ಹೋಯಿತು.

೧೨೮ ಅಪಕಾರಾ ಮಾಡುವವ ಅಪಕೀರ್ತಿಗಂಜ್ಯಾನೇ.

೧೨೯ ಅಪ್ಪನ ಅಪ್ಪಾ ಅನ್ನದವ ಚಿಕ್ಕಪ್ಪನ ಅಪ್ಪಾ ಅಂದಾನೇ.

೧೩೦ ಅಪ್ಪ ನೆಟ್ಟ ಆಲದ ಮರವಾದರೆ ನೇಣು ಹಾಕಿ ಕೊಳ್ಳ ಬಹುದೋ.

೧೩೧ ಅಪ್ಪ ಸತ್ತ ಆರು ತಿಂಗಳಿಗೆ ಹುಚ್ಚ ಮಾವ ಬಂದು ಕೊರಳು ಕಟ್ಟಿ [ಕೊಂಡು ಅತ್ತ.

೧೩೨ ಅಪ್ಪ ಹೆಣ್ಣು ಯಾರಿಗೆ ಕೇಂತಾ.

೧೩೩ ಅಬದ್ಧಕ್ಕೆ ಅಪ್ಪಣೆಯೇ ಯೆಂದರೆ ಬಾಯಿಗೆ ಬಂದ ಹಾಗೆ.

೧೩೪ ಅಭ್ಯಾಸವಿಲ್ಲದ ಹಾರವ ಅಗ್ನಿ ಕಾರ್ಯಾ ಮಾಡಿದರೆ ಗಡ್ಡ ಮೀಸೆ ಹೊತ್ತಿತು.

೧೩೫ ಅಮಗದಲ್ಲಿ ಪಾತ್ರವಾಡುವಾಗ ಮದ್ದಳೇ ಯೆರವು ಬೇಡಿದರಂತೆ.

೧೩೬ ಅಮ್ಮನ ಮನಸು ಬೆಲ್ಲದ ಹಾಗೆ, ಮಗಳ ಮನಸು ಕಲ್ಲಿನ ಹಾಗೆ.
೧೩೭ ಅಮ್ಮನವರು ಪ್ರಾಯಸಮರ್ಥೆಯಾಗುವಾಗ ಅಯ್ಯನವರಿಗೆ
೧೩೮ ಅಯನ ನೋಡಿದ್ದೂ ಇಲ್ಲ, ಶಯನ ಮಾಡಿದ್ದೂ ಇಲ್ಲ. [ಕೈಲಾಸ.
೧೩೯ ಅಯ್ಯನಿಗಿಂತ ಶೈಯ ವಾಶಿ.
೧೪೦ ಅರದವ ಕುಡಿದಾನು.
೧೪೧ ಅರಮನೆಗೆ ಆರು ಬಾಯಿ.
೧೪೨ ಅರಮನೇ ಬದಕಿಗೆ ಆಕಾಶವೇ ಕಾವಲು.
೧೪೩ ಅರಮನೇ ತುಪ್ಪಕ್ಕೆ ಸೆರಗು ವೊಡ್ಡು.
೧೪೪ ಅರಮನೇ ಛತ್ರಕ್ಕೆ ಹೆಗ್ಗಣ ಗುದ್ದ್ಯಾಡಿದ ಹಾಗೆ.
೧೪೫ ಅರಮನೇ ಹಣಾ ಕಟ್ಟಿ ಅಕ್ಕಸಾಲೆಗೆ ಡೊಳ್ಳು ಬಂತು.
೧೪೬ ಅರಮನೇ ಹತ್ತಿರ ನೆರಮನೆ ಇರ ಕೂಡದು.
೧೪೭ ಅರಸನ ಅಂಕೆ ಇಲ್ಲ, ದೈವದ ಕಾಟವಿಲ್ಲ.
೧೪೮ ಅರಸನ ಕುದುರೆ ಕಾಲು ತುಳಿದರೆ ಇವನಿಗೆ ಬಂದ ಭಾಗ್ಯವೇನು.
೧೪೯ ಅರಸನ ಕುದುರೆ ಲಾಯದಲ್ಲೇ ಮುಪ್ಪಾಯಿತು.
೧೫೦ ಅರಸನಿಗೂ ಧನಿಷ್ಟೆ, ನನಗೂ ಧನಿಷ್ಟೆ. [ಅಲುಗುತ್ತದೆ.
೧೫೧ ಅರಸು ಅಂದರೆ ಊರು ನಡುಗುತ್ತದೆ, ಮುದುಕ ಅಂದರೆ ಗಡ್ಡ
೧೫೨ ಅರಸು ಆರು ಮೊಳ, ಬಂಟ ಯೆಂಟು ಮೊಳ. [ಬೊಗಸೆ.
೧೫೩ ಅರಸು ವೊಲಿದರೆ ಅರ್ಧ ರಾಜ್ಯ, ತಿರುಕ ವೊಲಿದರೆ ಮೂರು
೧೫೪ ಅರಸು ಕಟ್ಟಿದ ಮೇಲೆ ಆಟ ಉಂಟೇ.
೧೫೫ ಅರಸು ಯಾರಿಗೆ ಅಪ್ಪ, ಸೂಳೆ ಯಾರಿಗೆ ಅವ್ವ.
೧೫೬ ಅರಸುವಂಗರಸುವದು ಕಳವು ಹಾದರ ಮೋಕ್ಷ.
೧೫೭ ಅರಳೀಮರಾ ನೋಡಲೋ, ಬ್ರಹ್ಮರಾಕ್ಷಸನ್ನ ನೋಡಲೋ.
೧೫೮ ಅರಿಯೆ ಅಂದರೆ ಅರವತ್ತು ಗುಣ, ಬಲ್ಲೆನೆಂದರೆ ಬಹಳ ಕಷ್ಟ. [ಗುಣ.
೧೫೯ ಅರಿಯೆ ಅಂಬುವದು ಅರವತ್ತು ಗುಣ, ಕಾಣೆನೆಂಬುವದು ಕೋಟಿ

೧೬೦ ಅರಿಯೆ ಯೆಂಬುವದು ಆನೇ ಕೊಟ್ಟ ಕನಿ.

೧೬೧ ಅರಿಯುವವನಿಗೆ ಇನ್ನೂರು, ವೊರೆಯುವವಗೆ ಮುನ್ನೂರು.

೧೬೨ ಅರಿವೆಯ ಹರಿಕಿಗೆ ಗೋಣೀ ತ್ಯಾಪೇ ಹಚ್ಚ್ಯಾರೋ.

೧೬೩ ಅರಿಷ್ಟಕ್ಕೆ ಅಂಗಾರಕನೇ ಗುರಿ.

೧೬೪ ಅರೆಮರುಳಿಗೆ ಮರುಳು ನಾಯಿ ಕಚ್ಚಿ ತಂತೆ.

೧೬೫ ಅರ್ಥಕ್ಕೆ ಕಡಿಮೆಯಾದರೂ ಅನರ್ಥಕ್ಕೆ ಕಡಿಮೆ ಇಲ್ಲ.

೧೬೬ ಅಲ್ಪಕಾರ್ಯಕ್ಕೆ ಅರಮನೆಗೆ ಹೋಗ ಬಾರದು. [ಕೊಂಡ.

೧೬೭ ಅಲ್ಪಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೇ ಹಿಡಿಸಿ

೧೬೮ ಅಲ್ಪರ ಸಂಗ ಅಭಿಮಾನ ಭಂಗ.

೧೬೯ ಅಲ್ಲಿ ಇಲ್ಲಿ ತಿರುಗುವದಕ್ಕಿಂತಲೂ ಬೆಲ್ಲಾ ತಿಂದು ಸಾಯುವ ಅಂದ.

೧೭೦ ಅಲ್ಲಿ ಇಲ್ಲಿ ಯಾಕೆ ಅಲೆಯುತ್ತೀಯೇ ಇಲ್ಲಿ ಬಾ ಬಿಸಾಟ ಹಾಗೆ ಸಾಯುವಂತೆ.

೧೭೧ ಅಲ್ಲಿ ಉಂಟು, ಇಲ್ಲಿ ಉಂಟು, ಕಲ್ಲೊಳಗುಂಟೇ ಶಿವದಾನ.

೧೭೨ ಅಲ್ಲೇ ನ್ಯಾಯ ಇಲ್ಲೇ ಕಂಡಿತು, ಕೊಳ್ಳೇಮಲ್ಲಿ ಕೊಂಕುಳ ಕೂಸ.

೧೭೩ ಅವನ ಮಾತು ಕೆಸರಿನಲ್ಲಿ ನೆಟ್ಟ ಕಂಭ.

೧೭೪ ಅವನ ಸಾಕ್ಷಿ ಅಡ್ಡ ಗೋಡೇ ಮೇಲಣ ದೀಪ.

೧೭೫ ಅವನಿಗೆ ನಾನೇ ಸುಲಿದ ಬಾಳೇ ಹಣ್ಣು.

೧೭೬ ಅವರೆ ಅವರೆ ಯೆಲ್ಲಾ ವೊಂದೇ ಅವರೇ ಕೇರಿದ ಮೊರ ಬೇರೆ.

೧೭೭ ಅವಸರಕ್ಕೆ ಮೂರು ಮೊಳ ನೇಯ ಬ್ಯಾಡ.

೧೭೮ ಅವಾಂತ್ರದಲ್ಲಿ ಸಿಕ್ಕಿದ ಕುದುರೆ ದೇಶಾಂತ್ರವಾಗಿ ವೋಡಿ ಹೋಯಿತು.

೧೭೯ ಅಶನ ವಸನ ಸಿಕ್ಕಿದ ಮೇಲೆ ವ್ಯಸನವ್ಯಾಕೆ.

೧೮೦ ಅಸಲಿಗೆ ಮೋಸ ಲಾಭಕ್ಕೆ ಗುದ್ದ್ಯಾಟ.

೧೮೧ ಅಸಲು ಇಲ್ಲದೇ ಬಡ್ಡಿ ಇಲ್ಲ, ಮೊಸರು ಇಲ್ಲದೆ ಮಜ್ಜಿಗೆ ಇಲ್ಲ.

೧೮೨ ಅಸವಲ್ಲದವನ ಕೂಡೆ ಆರಂಭಾ ಮಾಡಿ ಹಸೀ ಅವರೇಕಾಯಿಗೆ ಮೋಹಿಸಿದ.

೧೮೩ ಅಳಲು ಭಕ್ತಿ, ಮಳಲ ಸೇವೆ.

೧೮೪ ಅಳಿದ ಊರಿಗೆ ಉಳಿದವನೇ ಗೌಡ.

೧೮೫ ಅಳಿಯನ ಮೋರೆ ಬೆಳಗಾತ ಕಾಣ ಬಹುದು.

೧೮೬ ಅಳಿಯ ಮುನಿದರೆ ಮಗಳ ಕರ ಕೊಂಡು ಹೋದಾನು.

೧೮೭ ಅಳಿಲು ಯೇರಿದರೆ ಅರಳೀಮರ ಅಲ್ಲಾಡೀತೋ.

೧೮೮ ಅಳುವ ಮಕ್ಕಳ ಕಣ್ಣೀರ ವೊರಸಿದ ಹಾಗೆ.

೧೮೯ ಅಳುವ ಮಕ್ಕಳ ಕೈಗೆ ಬೆಲ್ಲ ಕೊಟ್ಟ ಹಾಗೆ.

೧೯೦ ಅಳುವವನ ಯೆಡಕ್ಕೂ ಹೊಲಿಯುವವನ ಬಲಕ್ಕೂ ಕುಂದ್ರ ಬಾರದು.

೧೯೧ ಅಳುವ ಹೆಂಗಸನ್ನೂ ನಗುವ ಗಂಡಸನ್ನೂ ನಂಬ ಬಾರದು.

೧೯೨ ಅಕ್ಷರ ಬಾರದವನಿಗೆ ಶಿಕ್ಷೆಯೇ ಮುಖ್ಯ.

೧೯೩ ಆಕಳು ಕಪ್ಪಾದರೆ ಹಾಲು ಕಪ್ಪೇ.

೧೯೪ ಆಕಾಶಕ್ಕಿಂತ ಯೆತ್ತರವಿಲ್ಲ, ಭೂಮಿಗಿಂತ ಅಗಲವಿಲ್ಲ.

೧೯೫ ಆಕಾಶ ಹರಿದು ಬೀಳುವಾಗ್ಯೆ ಅಂಗೈ ವೊಡ್ಡಿದರೆ ನಿಂತೀತೇ.

೧೯೬ ಆಗದ ಕಾರ್ಯಕ್ಕೆ ಆಶೆ ಪಟ್ಟರೆ ಸಾಗುವದಿಲ್ಲ ಹೋಗುವದಿಲ್ಲ.

೧೯೭ ಆಗದ ಹೋಗದ ಬದುಕಿಗೆ ರಾಗಿ ಯಾಕೆ. [ರೇಶ್ವರ.

೧೯೮ ಆಗ ಭೋಗಕ್ಕೆಲ್ಲಾ ರಂಗಸ್ವಾಮಿ, ಸತ್ಯ ಪ್ರಮಾಣಕ್ಕೆ ಗಂಗಾಧ

೧೯೯ ಆಗೋದು ಹೋಗೋದು ದೇವರಿಚ್ಛೆ, ಹೂಡೋದು ಬಿತ್ತೋದು ನನ್ನಿಚ್ಛೆ.

೨೦೦ ಆಗೋಪೂಜೆ ಆಗುತ್ತಿರಲಿ, ಊದೋ ಶಂಖಾ ಊದಿ ಬಿಡುವ.

೨೦೧ ಆಚಾರ್ಯರ ಮಗನಾಗಿ ಪುರಾಣಿಕನ ಅಳಿಯನಾಗಿ ಘೃತ ಅಂದರೆ ಅರಿಯೆನೇ ಯೆಮ್ಮೆಶಗಣಿಯು.

೨೦೨ ಆಚಾರ್ಯರಿಗೆ ವಿದ್ಯೆಯೂ ಇಲ್ಲ, ಗರ್ವವೂ ಇಲ್ಲ.

೨೦೩ ಆಚಾರ್ಯರೇ ದಾವ ಊರು ಅಂದರೆ ಧಾವಳಿ ಮೂರು ಹಣ. [ಅಳು.

೨೦೪ ಆಚೆ ಬೀದಿಯಲ್ಲಿ ಅವಮಾನವಾದರೆ ಈಚೆ ಬೀದಿಯಲ್ಲಿ ಹೊಸ

೨೦೫ ಆಟಕ್ಕೆ ತಕ್ಕ ವೇಷ, ವೇಷಕ್ಕೆ ತಕ್ಕ ಭಾಷೆ.

೨೦೬ ಆಟದವನಿಗೆ ದೀವಟಿಗೆಯವನ ಮೇಲೆ ಕಣ್ಣು.

೨೦೭ ಆಟವೂ ಮುಗೀತು, ತಂತಿಯೂ ಹರೀತು. [ದ್ದಿತಂತೆ.

೨೦೮ ಆಡಿ ಬಂದ ಕತ್ತೆ ಅಡಿಕೆ ತಂದ ಕತ್ತೆಯನ್ನು ವೋದ್ಯಾಡಿಸಿ ವೊ

೨೦೯ ಆಡುವ ಮಕ್ಕಳು ಆಡ ಬೇಕು, ಬೇಡುವ ಮಕ್ಕಳು ಬೇಡ ಬೇಕು.

೨೧೦ ಆಡುವ ಮಗುವಿನ ಕೈಯಲ್ಲಿ ಕಾಡುವ ಮಗುವನ್ನು ಕೊಟ್ಟಂತೆ.

೨೧೧ ಆಡು ಹಾಗ, ಕೂಳಿ ಮುಪ್ಪಾಗ.

೨೧೨ ಆಡೆ, ಆಡಿದರೆ ಸೋಲೆ, ಸೋತರೆ ಕೊಡೆ, ಕೊಟ್ಟರೆ ಯೆಡವಟ್ಟು.

೨೧೩ ಆಣಿಕಾರನ ಮನೆಯ ತೊತ್ತು ಸಾಣ್ಯಾನೋಟವ ಬಲ್ಲಳೇ.

೨೧೪ ಆತನ ತಮ್ಮನೀತನೆಂದು ಮಾತಿನಿಂದ ತಿಳಿಯ ಬಹುದು.

೨೧೫ ಆದರೆ ವೊಂದು ಅಡಿಕೆ ಮರ, ಹೋದರೆ ವೊಂದು ಗೋಟಡಿಕೆ.

೨೧೬ ಆದರೆ ಹೋದರೆ ಹತ್ತೀ ಬೆಳದರೆ ಅಜ್ಜೀ ನಿನಗೊಂದು ಪಟ್ಟೇಶೀರೆ.

೨೧೭ ಆದಷ್ಟು ಆಯಿತು ಬರಡೆಮ್ಮೆ ಹಾಲು.

೨೧೮ ಆದಿ ಹಿಡಿದ ಮನುಷ್ಯಗೆ ಅದೇ ಮುಪ್ಪು.

೨೧೯ ಆನೆ ಕಂಡು ಶ್ವಾನ ಬೊಗುಳಿದ ಹಾಗೆ.

೨೨೦ ಆನೆಕಡಿಯುವೆನೇ ಗಜಲಕ್ಷ್ಮಿ, ಕುದುರೆಕಡಿಯುವೆನೇ ಅಶ್ವಲಕ್ಷ್ಮಿ, ಶಿಪಾಯಿಗಳಂತು ಸರಿಯೇ ಸರಿ, ತಾನಿನ್ನ್ಯಾರನ್ನ ಕಡಿಯಲಿ ಅಂದರೆ ಕಡಿಯಲೇ ಬೋಳು ಹಾರುವನ.

೨೨೧ ಆನೆಗೆ ಗುಂಗುರು ಕಾಡಿದ ಹಾಗೆ.

೨೨೨ ಆನೆ ತಿಂಬೋದು ಸೊಪ್ಪು, ಇರುವೆ ತಿಂಬೋದು ಸಕ್ಕರೆ.

೨೨೩ ಆನೆ ನುಂಗಿದ ಬೇಲದ ಕಾಯಿ ಹಾಗೆ.

೨೨೪ ಆನೆ ಬೆಂಡಾದರೆ ಕೊಟ್ಟಿಗೇ ಹೊಕ್ಕೀತೇ.

೨೨೫ ಆನೆ ಮಲಗಿದರೆ ಆಡಿನಷ್ಟು ಉದ್ದವಿಲ್ಲವೇ.

೨೨೬ ಆನೆ ಮೆಟ್ಟಿದ್ದೇ ಸಂದು, ಶೆಟ್ಟಿ ಬಿಟ್ಟಲ್ಲೇ ಪಟ್ಟಣ.

೨೨೭ ಆನೆ ಯೆತ್ತ, ಆಡು ಯೆತ್ತ.

೨೨೮ ಆನೆ ಹೂಸಿದ ಹಾಗೆ ದುಶ್ಶಬ್ದ ಮಾತ್ರವೇ.

೨೨೯ ಆನೇ ಚಾಕರನ ಹೆಂಡತಿ ಆರು ತಿಂಗಳಿಗೆ ಮುಂಡೆ, ಕುದುರೆ ಚಾಕರನ ಹೆಂಡತಿ ದಿನ ದಿನಕ್ಕೂ ಮುಂಡೆ, ದಂಡೀಗೆ ಹೋದವನ ಹೆಂಡತಿ ಯೆಲ್ಲಿದ್ದರೂ ಮುಂಡೆ.

೨೩೦ ಆನೇ ಮೇಲೆ ಹೋಗುವವನ ಸುಣ್ಣಾ ಕೇಳಿದ ಹಾಗೆ.

೨೩೧ ಆ ಬೆಕ್ಕಲ್ಲ, ಈ ಬೆಕ್ಕು.

೨೩೨ ಆ ಮಾತಿಗೆ ಈ ಮಾತು ಪ್ರತ್ಯುತ್ತರವದೆ, ಮುಂಡೆ ಅಂದರೆ ಮುಂ[ಡೇ ಗಂಡ ಯೆಂಬುವದು.

೨೩೩ ಆಯಾ ಹಾಕುವಾಗಲೇ ನ್ಯಾಯ ಬಂತು.

೨೩೪ ಆರಾಳು ಮೂರು ಫೌಜು.

೨೩೫ ಆರಿದ ನೀರಿಗೆ ನೆಲವೇ ಸಾಕ್ಷಿ.

೨೩೬ ಆರುಗಾಲ ಮಳೆ ಹೊಯ್ದರೂ ಮುತ್ತುಗಕ್ಕೆ ಮೂರೇ ಯೆಲೆ.

೨೩೭ ಆರು ಹೆತ್ತವಳಿಗಿಂತ ಮೂರು ಹೆತ್ತವಳು ಮುಲುಕು ಕಲಿಸಿದಳಂತೆ.

೨೩೮ ಆರ್ತಿ ಮೀರಿ ಪೂರ್ತಿ ಹೋಗೋದಾಯ್ತು.

೨೩೯ ಆಲಸ್ಯದವಗೆ ಯೆರಡು ಕೆಲಸ, ಲೋಭಿಗೆ ಮೂರು ಖರ್ಚು.

೨೪೦ ಆಲಿಗೆ ಸನ್ನಿ ಮೀರಿದರೆ ಗೈಬುಗೆ ಸೂಡಿಟ್ಟರು.

೨೪೧ ಆಲೆ ಇಲ್ಲದ ಊರಿಗೆ ಇಪ್ಪೇ ಹೂವೇ ಸಕ್ಕರೆ.

೨೪೨ ಆವ ದೇಶಕ್ಕೆ ಹೋದರೂ ಅಟ್ಟೀಡದಭಿಲಾಷೆ ಬಿಡದು.

೨೪೩ ಆಶೆಗೆ ಅಂತ್ಯವಿಲ್ಲ, ಪಾಶಕ್ಕೆ ಕಡೆ ಇಲ್ಲ.

೨೪೪ ಆಶೆಗೆ ನಾಶವಿಲ್ಲ.

೨೪೫ ಆಸ್ತಿಕನ ದಾನ, ನಾಸ್ತಿಕನ ಭಿಕ್ಷೆ.

೨೪೬ ಆಳಾಗ ಬಲ್ಲವ ಅರಸಾಗ ಬಲ್ಲ.

೨೪೭ ಆಳಿಲ್ಲದವನಿಗೆ ಅರಸುತನವ್ಯಾಕೆ.

೨೪೮ ಆಳು ಕಟ್ಟಿದವನೇ ಅರಸು, ಕೂಳು ಇಕ್ಕಿದವನೇ ದಾತ.

೨೪೯ ಆಳು ಕಾಳು ಇದ್ದವನಾದರೆ ಕಾಳಯುಮ ಬಿಟ್ಟಾನೇ.

೨೫೦ ಆಳೂ ಆಗ ಬೇಕು, ಅರಸೂ ಆಗ ಬೇಕು.

೨೫೧ ಇಂಗು ಮೆಣಸು ಜೀರಿಗೇ.

೨೫೨ ಇಂಪು ಸಿಕ್ಕಿದರೆ ಸಂಪು.

೨೫೩ ಇಕ್ಕಲಾರದ ಕೈ ಯೆಂಜಲು.

೨೫೪ ಇಕ್ಕುವವನಿಗೆ ತಿಳಿಯದಿದ್ದರೆ ಉಂಬುವವನಿಗೆ ತಿಳಿಯದೇ.

೨೫೫ ಇಕ್ಕುವರಿಗೆ ಇಕ್ಕಿದರೆ ಮಕ್ಕಳಿಗೇನು.

೨೫೬ ಇಕ್ಕುವವಳು ನಮ್ಮವಳಾದರೆ ಕೊಟ್ಟಿಗೆಯಲ್ಲಿಯಾದರೂ ಉಂಡೇನು.

೨೫೭ ಇಚ್ಚಕನು ಚಿಕ್ಕವನಲ್ಲ.

೨೫೮ ಇಟ್ಟದ್ದು ಕಾಣದೇ ಕುಟ್ಟಿಕೊಂಡ.

೨೫೯ ಇಡೀ ಮುಳುಗಿದ ಮೇಲೆ ಚಳಿಯುಂಟೇ.

೨೬೦ ಇತ್ತವರ ಮಿಥ್ಯವಾದರೆ ಮತ್ತೆ ಬೇಡೋದ್ಯಾಕೆ.

೨೬೧ ಇತ್ತಿತ್ತ ಬಾ ಅಂದರೆ ಇದ್ದ ಮನೇ ಕಿತ್ತು ಕೊಂಡ.

೨೬೨ ಇತ್ತಿತ್ತ ಬಾ ಯೆಂದರೆ ಹೆಗಲ ಮೇಲೆ ಹತ್ತಿ ಕೊಂಡ.

೨೬೩ ಇದ್ದ ಊರ ಹಗೆ ಸಲ್ಲ, ಕದ್ದು ಕೊಂಬುವರ ನೆರೆ ಸಲ್ಲ.

೨೬೪ ಇದ್ದ ತಂಗಳು ನನಗಿಕ್ಕು, ನಿನಗೆಂದೆಂದಿಗೂ ಹಸಿವಿಲ್ಲದ ಹಾಗೆ ಮಾಡುತ್ತೇನೆ.

೨೬೫ ಇದ್ದದ್ದು ಹೋಗಲಾಡಿಸಿದ್ದಲ್ಲದೆ ಕಲಿತ ಬುದ್ಧಿಯಲ್ಲಾ.

೨೬೬ ಇದ್ದದ್ದೂ ಹೋಯ್ತು ಮದ್ದಿನ ಗುಣ.

೨೬೭ ಇದ್ದ ಮಕ್ಕಳಿಗೆ ಕೂಳಿಲ್ಲ, ಮತ್ತೊಂದು ಕೊಡೋ ಶಿವರಾಯ.

೨೬೮ ಇದ್ದ ಮತಿ ಹಾರಿತೋ ಸಿದ್ಧಿ ಗಣೇಶ.

೨೬೯ ಇದ್ದ ಮನೆ ಬಿದ್ದು ಹೋದರೆ ಗೆದ್ದು ಕೊಂಡ ರಾವುತ.

೨೭೦ ಇದ್ದಲು ಮಶಿಯಂತಾ ಮೈಯ್ಯ ಉಜ್ಜಿ ಉಜ್ಜಿ ತೊಳದರೂ ಇದ್ದ ರೂಪವಲ್ಲದೇ ಪ್ರತಿ ರೂಪವಾಗದು.

೨೭೧ ಇದ್ದಲ್ಲಿರುವದಿಲ್ಲ, ಬಿದ್ದ ಗೋಡೇ ಹಾಕುವದಿಲ್ಲ.
೨೭೨ ಇದ್ದವರ ಕರಿ, ಬಂದವರ ಸಿರಿ.
೨೭೩ ಇದ್ದವರು ಇದ್ದ ಹಾಗೆ, ಸಿದ್ದಾದೇವಿಗೆ ಸಿಡಿಲು ಬಡೀತು.
೨೭೪ ಇದ್ದವರು ಮೂವರು, ಕದ್ದವರು ಯಾರು.
೨೭೫ ಇಬ್ಬರ ನಾಯ ವೊಬ್ಬನಿಗಾಯು.
೨೭೬ ಇಬ್ಬರಿದ್ದರೆ ಯೇಕಾಂತ, ಮೂವರಿದ್ದರೆ ಲೋಕಾಂತ.
೨೭೭ ಇಬ್ಬಾಯಿ ಇದ್ದವನ ಕುಬ್ಬಾಟ ಬಹಳ.
೨೭೮ ಇರವಾರ ಕೆಟ್ಟು ಪುರವಾರ ಸೇರಿದ.
೨೭೯ ಇರುವೇ ಕಾಲಿಗೆ ಮಣ್ಣಿನ ಸಂಕೋಲೆ.
೨೮೦ ಇರುವೇ ಭಾರ ಇರುವೆಗೆ, ಆನೇ ಭಾರ ಆನೆಗೆ.
೨೮೧ ಇರುಳು ಕಂಡ ಭಾವಿಯಲ್ಲಿ ಹಗಲು ಬಿದ್ದ.
೨೮೨ ಇರುಳು ಕಾಗೆಗೆ ಆಗದು, ಹಗಲು ಗೂಬೆಗೆ ಆಗದು.
೨೮೩ ಇರುಳು ನೋಡಿ ಮರುಳುಗೊಂಡ.
೨೮೪ ಇಲಿಗೆ ಹೆದರಿ ಹುಲೀ ಬಾಯಲ್ಲಿ ಬಿದ್ದ.
೨೮೫ ಇಲಿ ಪಾದರಸಾ ಕುಡಿದ ಹಾಗೆ.
೨೮೬ ಇಲೀ ವೊಳಗೆ ಬಿಟ್ಟು ಬಿಲಕ್ಕೆ ಮಣ್ಣು ಮೆತ್ತಿದ.
೨೮೭ ಇಲ್ಲದವನು ತಲ್ಲಣಿಸನು.
೨೮೮ ಇಲ್ಲೊಂದು ಹುಲ್ಲು ಮೆಲಿ ಬಹುದೇ.
೨೮೯ ಇವನ ಕೊಂಡು ಹೋಗಿ ಜವನ ತಪ್ಪಿಸು.
೨೯೦ ಇವನವನಿಗೆ ಯೆಣ್ಣೆ ಶೀಗೆ.
೨೯೧ ಇಷ್ಟವಾದವರು ಕಷ್ಟ ಪಡಿಸ್ಯಾರೋ.
೨೯೨ ಇಹಾ ನಂಬಿ ಪರಾ ಮರತ.
೨೯೩ ಈ ಊಟಕ್ಕೆ ಈ ನಾಮ ಸಾಲದೇ.
೨೯೪ ಈಗ ತೂಗಿ ನೋಡಿದರೆ ಆಗಿನ ಗುಣ ಕಂಡೀತು.

೨೯೫ ಈಚಲು ಮರದ ಕೆಳಗೆ ಮಜ್ಜಿಗೇ ಕುಡಿದರೆ ನಾಚಿಗೆ ಗೇಡಾಗದೇ.
೨೯೬ ಈಚೆಯಿಂದ ಆಚೆಗೆ ಹೋಗಲಿಕ್ಕೆ ಮೋಚೆಯಿಂದಾಗುವದೇ.
೨೯೭ ಈಟಿಲ್ಲದವನಿಗೆ ಮೊಟಾದ ಹೆಂಗಸು.
೨೯೮ ಈಟು ಇದ್ದ ಹೊಲದ ಕೋಟು ನೋಡ ಬೇಡ.
೨೯೯ ಈಡು ಇಟ್ಟರೆ ನಾಡು ನಂಬುವದು.
೩೦೦ ಈತನಾಗಲಿ ಆತನಾಗಲಿ ಮಾತು ಪೊಂದಿರ ಬೇಕು.
೩೦೧ ಈತನಿಗಿಂತ ಆತ ವಾಸಿ ಯೆಬ್ಬಿಸಿದರೆ ಉಣ್ಣುತ್ತಾನೆ.
೩೦೨ ಈತನ ಮಾತಿಗೆ ಆತ ಸೋತ.
೩೦೩ ಈದದ್ದೂ ಅಲ್ಲ, ನೆಕ್ಕಿದ್ದೂ ಅಲ್ಲ.
೩೦೪ ಈ ಮುಖಕ್ಕೆ ಯಾಕೆ ಮೇಲುಗೋಟೆ ನಾಮ.
೩೦೫ ಈರಣ್ಣನ ಮುಂದಣ ಬಸವಣ್ಣ.
೩೦೬ ಈರಾರು ಹನ್ನೆರಡೆಂದರೆ ನಾರೋ ಮುಂಡೇ ಹೋಗಂದ.
೩೦೭ ಈಶ ನಾಶ ಮಾಡ್ಯಾನೋ.
೩೦೮ ಈಶ್ವರಗಿಂತ ಗಡಬಡೇಶ್ವರ ದೊಡ್ಡವನೋ.
೩೦೯ ಈಶ್ವರಾಂಶಜನಲ್ಲದೇ ಇಳೆಯನ್ನಾಳಲಾರನು.
೩೧೦ ಈಸೀಸಗಲ ದೋಶೆ ಯೇಸೇಸು ಮದ್ದೀ.
೩೧೧ ಈಸುವವನಿಗೆ ಮೊಶೆ ಭಾರವೇ.
೩೧೨ ಈ ಹಳ್ಳ ಆ ಕಳ್ಳಗೆ ಈಡೇ.
೩೧೩ ಈಹೊತ್ತು ಹರಿಕಥೆ ಶೀಯೋ ಉಪ್ಪೋ.
೩೧೪ ಉಂಗರ ದೊಡ್ಡದಾದರೆ ಗಂಗರವಾದೀತೇ.
೩೧೫ ಉಂಟು ಮಾಡಿದ ದೇವರು ಊಟವ ಕೊಡಲಾರನೋ.
೩೧೬ ಉಂಡದ್ದು ಉಂಡ ಹಾಗೆ ಹೋದರೆ ವೈದ್ಯನ ಹಂಗೇನು.
೩೧೭ ಉಂಡದ್ದೆಲ್ಲಾ ಕುಂಡೇಲೇ ಹೋಯ್ತು.
೩೧೮ ಉಂಡದ್ದೇ ಯುಗಾದಿ, ಮಿಂದದ್ದೇ ದೀವಳಿಗೆ.

೩೧೯ ಉಂಡವನಿಗೆ ಹಸಿವಿಲ್ಲ. ಮಿಂಡಗಾರನಿಗೆ ನಾಚಿಕೆ ಇಲ್ಲ.

೩೨೦ ಉಂಡವರಿಗೆ ಊಟ ಬೇಡ, ಗುಂಡು ಕಲ್ಲಿಗೆ ಯೆಣ್ಣೆ ಬೇಡ.

೩೨೧ ಉಂಡವ ಹರಸ ಬೇಡ, ನೊಂದವ ಬೈಯ ಬೇಡ.

೩೨೨ ಉಂಡಿಯೇನೋ ಗುಂಡ ಭಟ್ಟ ಹೌದು ಕಾಣೆ ರಂಡೆ ಮುಂಡೆ.

೩೨೩ ಉಂಡಿಯೇನೋ ಗುಂಪಾ ಅಂದರೆ ಮುಂಡಾಸು ಮೂವತ್ತು ಮೊಳ.

೩೨೪ ಉಂಬುವದಕ್ಕೆ ಉಡುವದಕ್ಕೆ ಅಕ್ಕನ ಕಳೆ, ಕೋಳಕ್ಕೆ ಹೆಟ್ಟೋದಕ್ಕೆ
ಭಾವನ ಕಳೆ.

೩೨೫ ಉಂಬೋಕೆ ಉಡೋಕೆ ಅಂಣಪ್ಪ, ಕೆಲಸಕ್ಕೆ ಮಾತ್ರ ಡೊಣ್ಣಪ್ಪ.

೩೨೬ ಉಂಬೋಕೆ ತಿಂಬೋಕೆ ಮಾಳಾಯಿ, ಕಿಚ್ಚು ಹೊರೋಕೆ ಸಾಂ

೩೨೭ ಉಮ್ಮೊ ಕುಟ್ಟಿ ಕೈಗುಳ್ಳೆಯಾಯ್ತು. [ತಾಯಿ.

೩೨೮ ಉಕ್ಕಿನ ಕೊಡಲಿಯಾದರೂ ಕಡಿಯಲು ಕಾವು ಬೇಕು.

೩೨೯ ಉಕ್ಕಿ ಬಂದದ್ದು ತೆಗದು ಹಾಕಿದರೆ ಮಿಕ್ಕದ್ದಕ್ಕೆ ಮೋಸವಿಲ್ಲ.

೩೩೦ ಉಗುರಲ್ಲಿ ಹೋಗುವದಕ್ಕೆ ಕೊಡಲಿಯೇ.

೩೩೧ ಉಚ್ಚೆಯಲ್ಲಿ ಮೀನು ಹಿಡಿಯ ಬಹುದೇ.

೩೩೨ ಉಚ್ಚೇ ಕುಡಿದರೂ ತನ್ನಿಷ್ಟೆ ತೇಸು.

೩೩೩ ಉಚ್ಚೇ ಕುಡಿಯಲಿಕ್ಕೆ ಉಪ್ಪುಕೇಳಿದ.

೩೩೪ ಉಟ್ಟದ್ದು ಹರಿಯದಿದ್ದರೆ ನಷ್ಟವೇನು. [ಹೇಸ.

೩೩೫ ಉಡೋಕಿಲ್ಲದವ ಮೈಲಿಗೆಗೆ ಹೇಸ, ಉಂಬೋಕಿಲ್ಲದವ ತಂಗಳಿಗೆ

೩೩೬ ಉಣ್ಣಲಾರದವ ಇಕ್ಕೋರನು.

೩೩೭ ಉಣ್ಣಲಿಕ್ಕಿಲ್ಲದವ ಬಣ್ಣಾ ಬಯಸಿದ.

೩೩೮ ಉಣ್ಣೋ ಬಟ್ಟೆ ಬಣ್ಣಕ್ಕಾದೀತೇ.

೩೩೯ ಉತ್ತಮನೆತ್ತ ಹೋದರೂ ಶುಭವೇ.

೩೪೦ ಉತ್ತರಾ ಕೊಡದಿದ್ದರೆ ಸತ್ತವನ ಹಾಗೆ.

೩೪೧ ಉತ್ತ ಹೊಲ ಬಿತ್ತಿಸಿ ಕೊಂಡೀತು, ಸತ್ತ ಹೆಣ ಸುಡಿಸಿ ಕೊಂಡೀತು.

೩೪೨ ಉತ್ತು ಬರುವ ಮಗ ತೆವಳಿ ಬಂದರೆ ಹೆತ್ತ ತಾಯಿಯ ಪುಣ್ಯ.
೩೪೩ ಉದರಕ್ಕೋಸ್ಕರ ಸದೆಯಾದರೂ ಹುಡುಕ ಬೇಕು.
೩೪೪ ಉದ್ದವಾಗಿ ಬೆಳೆದವನಿಗೆ ಬುದ್ಧಿ ಕಡಿಮೆ.
೩೪೫ ಉದ್ದಾನೇ ಕುತ್ತಿಗೆಗೆ ಮಲಿಕೇ.
೩೪೬ ಉದ್ದು ಉಬ್ಬಿದರೆ ಮದ್ದಳೆ ಆದೀತೇ.
೩೪೭ ಉದ್ದು ಮದ್ದಲ್ಲ, ಕದ್ದವ ಸಬಗನಲ್ಲ.
೩೪೮ ಉದ್ದು ಮದ್ದಿಗೆ ಸಲ್ಲ, ನಿದ್ದೆ ಯೋಗಿಗೆ ಸಲ್ಲ.
೩೪೯ ಉದ್ದು ಮೇದ ಕತ್ತೇ ಹಾಗೆ ಬುದ್ಧಿ ಹೀನನು.
೩೫೦ ಉದ್ದು ಉರುಳಿದರೆ ಹೆದ್ದಾರಿ ದಾಟೀತೇ. [ಬೇಡ.
೩೫೧ ಉದ್ಯೋಗವಿಲ್ಲದ ಊರಲ್ಲಿ ಉದ್ದು ಉರುಳುವಷ್ಟು ಹೊತ್ತಿರ
೩೫೨ ಉದ್ಯೋಗವಿಲ್ಲದ ತೊತ್ತು ಉದ್ದು ಹುರಿದು ತಿಂದಳು.
೩೫೩ ಉದ್ಯೋಗವಿಲ್ಲದ ಬಡಗಿ ಮಕ್ಕಳ ಶಿಕಾ ಕೆತ್ತಿದ.
೩೫೪ ಉನ್ನತನು ಸನ್ಮತವಾಗಿ ನಡಿಯ ಬೇಕು.
೩೫೫ ಉಪಕಾರಕ್ಕೆ ಅಪಕಾರ ಮಾಡ ಬೇಡ.
೩೫೬ ಉಪಕಾರಕ್ಕೆ ಹೋಗಿ ಉಪದ್ರ ಬಂತು.
೩೫೭ ಉಪಕಾರವರಿಯದವನ ನಿಪುಣನೆಂದು ಹೇಳ ಬೇಡ.
೩೫೮ ಉಪದೇಶಾ ಕೇಳಿದರೂ ಉಪದ್ರ ತಪ್ಪಲಿಲ್ಲ. [ತಾನೇ ಬಿಡುತ್ತಾನೆಂದ.
೩೫೯ ಉಪಾಧ್ಯರೇ ನಿಮ್ಮ ಮಗ ಬೇವು ತಿನ್ನುತ್ತಾನೆಂದರೆ ಕಹಿಯಾದರೆ
೩೬೦ ಉಪ್ಪಾರನ ಮಗನಾದರೆ ಉಪ್ಪಿಲ್ಲದೇ ಉಂಡಾನೇ.
೩೬೧ ಉಪ್ಪಿಟ್ಟವರನ್ನು ಮುಪ್ಪಿನನಕಾ ಮರೆಯ ಬಾರದು.
೩೬೨ ಉಪ್ಪಿನ ರಾಶೀ ಮೇಲೆ ಮಜ್ಜಿಗೇ ತಟಕು.
೩೬೩ ಉಪ್ಪಿನಲ್ಲೇ ಮುಪ್ಪು ಬಂದರೂ ಉಪ್ಪು ತಿಂದ ವಿನಹಾ ಕೂಡದು.
೩೬೪ ಉಪ್ಪಿನವ ಕೆಟ್ಟನೆಂದರೆ ತೆಂಗಿನಕಾಯಿಯವ ಹೊರಳಿ ಹೊರಳಿ ಅತ್ತ.
೩೬೫ ಉಪ್ಪಿಲ್ಲದೆ ಮೂಗಳ ಗಂಜೀ ಕುಡಿಯುವಗೆ ಉಪ್ಪಿದ್ದರೆ ನಾಗ
ಳವೂ ಸಾಲದು.

೩೬೬ ಉಪ್ಪು ತಿಂದವ ನೀರು ಕುಡಿದಾನು.

೩೬೭ ಉಪ್ಪು ಸಪ್ಪೆ ಆದರೂ ಖಾರ ಬಿಡದು.

೩೬೮ ಉಬ್ಬಿದ ಕಪ್ಪೆ ಆನೇ ನುಂಗೀತೇ.

೩೬೯ ಉರಿಯುವ ಬೆಂಕಿಯಲ್ಲಿ ಯೆಣ್ಣೇ ಹೊಯ್ದ.

೩೭೦ ಉರಿಶೀತವಾಗಿ ನರಿ ಸತ್ತಿತು.

೩೭೧ ಉರುಹಾದದ್ದು ಉರುಳದೇ ಇರದು.

೩೭೨ ಉರುಲು ಹಾಕಿ ಕೊಳ್ಳುವವನಿಗೆ ಕೊರಳ ಫಂದಾ ತೋರಿಸಿದ.

೩೭೩ ಉಳಿ ಸಣ್ಣದಾದರೂ ಮರಾ ಕಡಿಯೋದು ಬಿಡದು.

೩೭೪ ಉಳ್ಳೀ ತಿಂದವಗೆ ಉಳುಕಿತು.

೩೭೫ ಊಚವಾದದ್ದು ನೀಚವೆಂತಾ ಹೇಳ ಬಾರದು.

೩೭೬ ಊಟ ಆಯಿತು ವೊಲೇ ಕಿತ್ತು ಹಾಕು.

೩೭೭ ಊಟಕ್ಕಿಲ್ಲದ ಉಪ್ಪಿನಕಾಯಿ ಯಾತಕ್ಕೂ ಬೇಡ.

೩೭೮ ಊಟಕ್ಕಿಲ್ಲದವನು ಕಾಟಾ ಮಾಡದೆ ಇರನು.

೩೭೯ ಊಟಕ್ಕೆ ಕೀಚ್ಕು ಬಿತ್ತು, ಗಂಧಾ ತೇದು, ಹೆಣ ಹೋಯ್ತು.

೩೮೦ ಊಟಕ್ಕೆ ಮುಂಚು, ದಂಡಿಗೆ ಹಿಂಚು.

೩೮೧ ಊಟಕ್ಕೆ ಮುಂಚು, ವಿಮಾನಕ್ಕೆ ಹಿಂಚು.

೩೮೨ ಊಟ ಚಲೋದಾಯಿತು, ಹೊಟ್ಟೆ ಮಾತ್ರಾ ತುಂಬಲಿಲ್ಲ.

೩೮೩ ಊಟದಲ್ಲಿ ನೀಟಾಗಿರ ಬೇಕು.

೩೮೪ ಊಟ ಪಣಿಸಿದ ಹಾಗೆ.

೩೮೫ ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ.

೩೮೬ ಊಟ ಬೇಡವೆಂದು ನಾಟವಿಕ್ಕೆ ಹೋದ.

೩೮೭ ಊಟ ಬೇರೆ, ಪಡಿ ಬೇರೆ.

೩೮೮ ಊಟ ಹಾಗ, ಫಲಹಾರ ಮುಪ್ಪಾಗ.

೩೮೯ ಊದಿದಷ್ಟೂ ಬೆಳ್ಳಿ ಬೂದಿ ಆಯಿತು.

೩೯೦ ಊರಗುದ್ದಲಿ ತಂದು ಸಾಡು ಕಾಲಿವೆ ಶೆಗದ. [ಮಾತು.
೩೯೧ ಊರ ಮುಂದೆ ನೇಗಿಲ ಹೂಡಿದರೆ ಕಂಡಕಂಡವರಿಗೆ ವೊಂದೊಂದು
೩೯೨ ಊರಲ್ಲಿ ತಿರಿದುಂಡು ನನ್ನಲ್ಲಿ ಬಂದು ಪದಾ ಹೇಳು.
೩೯೩ ಊರ ಶೇರಿದ ಮೇಲೆ ದಾರಿ ತೀರಿತು.
೩೯೪ ಊರಿಗೆ ಅರಸನಾದರೂ ತಾಯಿಗೆ ಮಗ.
೩೯೫ ಊರಿಗೆ ದಿಕ್ಕಿಲ್ಲ, ಯಾರಿಗೆ ಅಳಲಿ.
೩೯೬ ಊರಿಗೆ ಬಂದ ಮಾರಿ ಉಂಡಲ್ಲದೇ ಹೋಗದು. [ನೆಂಟರು.
೩೯೭ ಊರಿಗೆ ಬರುವನಕಾ ವೊಬ್ಬ ನೆಂಟ, ಊರಿಗೆ ಬಂದ ಮೇಲೆ ಯೆಲ್ಲರೂ
೩೯೮ ಊರಿಗೆ ಹಬ್ಬವಾದರೆ ಸಾಯಿಗೆ ಲೊಲ್ಲೊಟ್ಟಿ.
೩೯೯ ಊರಿಗೆ ಹೋಗದವರಿಗೆ ದಾರೀ ಗೊಡವೆ ಯಾಕೆ.
೪೦೦ ಊರಿದ್ದ ಕಡೇ ಹೊಲಗೇರಿ.
೪೦೧ ಊರು ಉಪಕಾರಾ ಅರಿಯದು, ಹೆಣ ಶೃಂಗಾರವರಿಯದು.
೪೦೨ ಊರು ತಿರಿದು ಜೂಲುನಾಯಿಗೆ ಹಾಕಿದ.
೪೦೩ ಊರು ಬಿಟ್ಟು ಹೊಲಗೇರಿಯಲ್ಲಿ ತಂಗಿದರು.
೪೦೪ ಊರು ಬೇರೆಯಾದರೂ ಪ್ರಾರಬ್ಧ ಬೇರೆಯೇ. [ರಡ ಬೇಕು.
೪೦೫ ಊರು ಮೂರು ಸುತ್ತು ಸುತ್ತಿದರೂ ಊರು ಬಾಗಲಲ್ಲಿಯೇ ಹೊ
೪೦೬ ಊರು ಮೇಲೆ ಊರು ಬಿದ್ದರೆ ಶ್ಯಾನಭೋಗನಿಗೆ ಕೆಟ್ಟದ್ದೇನು.
೪೦೭ ಊರು ವೊಳ್ಳೇದೇ ಯೆಂದರೆ ಬಾಯಿ ವೊಳ್ಳೇದಿದ್ದರೆ ಊರು
೪೦೮ ಊರು ಸುಟ್ಟರೂ ಹನುಮಂತರಾಯ ಹೊರಗೆ. [ವೊಳ್ಳೇದು.
೪೦೯ ಊರು ಸುತ್ತಾ ಸುತ್ತಿದರೂ ಊರ ಬಾಗಲಲ್ಲಿ ನುಸಿಯ ಬೇಕು.
೪೧೦ ಊರು ಹಾಳಾದರೂ ಗಾವುದಕ್ಕೆ ಕಡಿಮೆಯೇ.
೪೧೧ ಊರೆಲ್ಲಾ ಕಂಡ ಮಾತನ್ನು ನನ್ನ ಕಿವಿಯಲ್ಲಿ ಹೇಳು.
೪೧೨ ಊರೆಲ್ಲಾ ತೊಳೆದರೂ ಮಸಿ ಬೆಳ್ಳಗಾಗದು.
೪೧೩ ಊರೆಲ್ಲಾ ಸೂರೆ ಆದ ಮೇಲೆ ಬಾಗಲು ಹಾಕಿದರು.

೪೧೪ ಊರೋದು, ಜಾರೋದು, ನಾರೋದು.
೪೧೫ ಎಂಜಲ ಕೈಯಿಂದ ಕಾಗೇ ವೋಡಿಸುವದಿಲ್ಲ.
೪೧೬ ಎಂಜಲಿಗೇ ಹೇಸದವಳು ತಂಗಳನ್ನಾ ಬಿಟ್ಟಾಳೇ. [ಯೆಂದ
೪೧೭ ಎಂಜಲು ಯೆತ್ತೋ ಗುಂಡಾ ಯೆಂದರೆ ಉಂಡವರು ಯೆಷ್ಟು ಜನ
೪೧೮ ಎಂತೆಂತವರು ಅಂತೇ ಹೋದರು, ಸಂಕ್ರಾಂತಿ ಬಂದು ಹುಳಿ ದೋಸೇ ಬೇಡಿತು. [ದೇವರಿಗೆ ಕೈಲಾಸವೆ.
೪೧೯ ಎಂತೆಂತಾ ದೇವರಿಗೆಲ್ಲಾ ಅಂತರಾಳದ ನೈವೇದ್ಯ, ಕಾಲುಮುರುಕ
೪೨೦ ಎಂದೂ ಇಲ್ಲದ ಮಾಣಿ ಅಮವಾಸೇ ದಿನ ವೋದ ಕೂತ.
೪೨೧ ಎಂದೂ ಯೇರದ ರಾವುತ ಕುದುರೇ ಹಿಂದುಮುಂದಾಗಿ ಯೇರಿದ.
೪೨೨ ಎಣ್ಣೆ ತಣ್ಣಗಾದರೆ ಬೆಣ್ಣೇ ಹಾಗೆ ಇದ್ಧೀತೇ.
೪೨೩ ಎಣ್ಣೆ ಬರುವಾಗ ಗಾಣ ಮುರೀತು.
೪೨೪ ಎಣ್ಣೆ ಸಿಕ್ಕಿದ್ದೇ ಶನಿವಾರ.
೪೨೫ ಎಣ್ಣೆ ಸೀಗೆಗೆ ಹ್ಯಾಗೋ ಹಾಗೇ ಪ್ರೀತಿ.
೪೨೬ ಎಣ್ಣೇ ಚೆಲ್ಲಿದವನೂ ಅತ್ತ, ಕಾಯಿ ಚೆಲ್ಲಿದವನೂ ಅತ್ತ.
೪೨೭ ಎಣ್ಣೇ ಹಾಕಿದರೆ ಕಣ್ಣಿಗೆ ಗುಣ, ಮಣ್ಣು ಹಾಕಿದರೆ ಬುಡಕ್ಕೆ ಗುಣ.
೪೨೮ ಎತ್ತನ್ನು ಹುಲಿ ತಿಂತು, ಸಬರ ಮುರೀ ಗೆದ್ದಲು ತಿಂತು.
೪೨೯ ಎತ್ತ ಹೋದರೂ ತುತ್ತು ಹುಡುಕುವದೇ.
೪೩೦ ಎತ್ತಿ ಕೊಂಡು ಹೋಗೋರಿದ್ದರೆ ಸತ್ತ ಹಾಗೆ ಬಿದ್ದೇನು.
೪೩೧ ಎತ್ತಿನ ಮುಂದೆ ತೆಂಗಿನಕಾಯಿ ವೊಡೆದ ಹಾಗೆ.
೪೩೨ ಎತ್ತು ಈಯಿತು ಅಂದರೆ ಕೊಟ್ಟಿಗೇಲಿ ತಂದು ಕಟ್ಟು ಅಂದ.
೪೩೩ ಎತ್ತು ಹಾರುವದಕ್ಕಿಂತ ಮುಂಚೆ ಕೌದಿ ಹಾರಿತು.
೪೩೪ ಎತ್ತೂ ಮಾರಿ ಮತ್ತೂ ಗಂಜಿ.
೪೩೫ ಎತ್ತೋದಕ್ಕೆ ಹೊತ್ತು ಕಳದರೆ ತುತ್ತುಗೊಳ್ಳ ಬೇಡವೇ.
೪೩೬ ಎದ್ದೇಳಲಾರದ ಬಡ್ಡಿ ಕೊಗ್ಗಿಡಿ ಗಿಡಾ ತಂದಾಳೋ.

೪೩೭ ಎದ್ದ್ಯಾ ಜೋಗಿ ಅಂದರೆ ಕಡಾಸು ಹೆಗಲ ಮೇಲೆ.

೪೩೮ ಎದ್ಧೋಗು ಅಂದರೆ ವೊದ್ಧೋಗುತ್ತೇನಂದ.

೪೩೯ ಎನಗೂ ಹರಿನಾಮ, ಮಾಧವನಿಗೂ ಹರಿನಾಮ. ಯೆನಗೂ ಜಲ
ಶಯನ, ಮಾಧವನಿಗೂ ಜಲಶಯನ. ಯೆನ್ನದು ಕಿರಿದೇನು,
ಮಾಧವನದು ಹಿರಿದೇನು. ಟೊರೋ ಟೊರೋ ಟೊರೋ

೪೪೦ ಎನ್ನ ಮೋರೆ ಬಟ್ಟಲು ಕದ್ದ ಹಾಗಿತ್ತೇ. [ಅಂದಿತು.

೪೪೧ ಎಮ್ಮೆಗಿಮ್ಮೆ ತಂದರೆ ಗಿಂದರೆ ತವರಮನೆಗೆ ಕೊಟ್ಟೀಯಾ, ನನ

೪೪೨ ಎಮ್ಮೇ ಮೇಲೆ ಮಳೆಗರದ ಹಾಗೆ. [ಗಿಕ್ಕೀಯಾ.

೪೪೩ ಎರಡು ದಾಸರಿಗೆ ನಂಬಿ ಕುರುಡ ದಾಸ ಕೆಟ್ಟ.

೪೪೪ ಎರವಿನ ಚಿನ್ನಾ ಧರಿಸಿ ತಾನೂ ಅರಸಿ ಯೆಂದಳು.

೪೪೫ ಎರವು ನಂಬಿ ನಿಜಾ ಮರತ. [ಭಾವನಲ್ಲ.

೪೪೬ ಎರವು ಸಿರಿಯಲ್ಲ, ಬಾವು ಡೊಳ್ಳಲ್ಲ ನೆರಮನೇ ಅಕ್ಕನ ಗಂಡ

೪೪೭ ಎಲೆಗೆ ಕಾಯಿ ಮರೆ, ಕಾಯಿಗೆ ಯೆಲೆ ಮರೆ.

೪೪೮ ಎಲ್ಲರಿಗೂ ವೊಂದೇ ಬಟ್ಟೆ, ಕೊಡಗನಿಗೆ ಬೇರೆ ಬಟ್ಟೆ.

೪೪೯ ಎಲ್ಲರೂ ನಕ್ಕರೆ ಹುಚ್ಚ ತಾನೂ ನಕ್ಕ.

೪೫೦ ಎಲ್ಲರೂ ನನಗಂಜಿದರೆ ನಾನು ವಿರಾಜಿಗಂಜುವೆನು.

೪೫೧ ಎಲ್ಲಾ ದೇವರ ಜಗಲಿಯಾದರೆ ನಿಲ್ಲೋದಕ್ಕೆ ಸ್ಥಳವೆಲ್ಲಿ.

೪೫೨ ಎಲ್ಲಾ ಬಣ್ಣಾ ಮಸಿ ನುಂಗಿತು.

೪೫೩ ಎಲ್ಲಾ ಬಿಟ್ಟ, ಭಂಗೀ ನಟ್ಟ.

೪೫೪ ಎಲ್ಲಾ ಹೊಕ್ಕಿತು, ಬಾಲ ಮಾತ್ರ ಉಳಿಯಿತು.

೪೫೫ ಎಲ್ಲಾ ಹೋದರೂ ಮಲ್ಲ ಉಳಿದ.

೪೫೬ ಎಲ್ಲಿಗೆ ಹೋದರೂ ಮನೆಗೆ ಬಪ್ಪ.

೪೫೭ ಎಷ್ಟು ಮಾಡಿದರೂ ನಷ್ಟವಾಗದೇ ಬಿಡದು.

೪೫೮ ಎಳ್ಳೆಗಾಗಿ ಬಾಲಾ ಹುಯಿಸಿ ಕೊಂಡ.

೪೫೯ ಎಲ್ಲಂತು ಬಿಸಿಲಿಗೆ ವೊಣಗುತ್ತದೆ, ನೀನ್ಯಾಕೆ ವೊಣಗುತ್ತಿ ಮಿ
೪೬೦ ಏಕಮತ್ಯ ಕಾಕ ಮಾಡದು. [ರೆ- ಬೀಜವೇ.
೪೬೧ ಏಕಾಂತ ಹೋಗಿ ಲೋಕಾಂತವಾಯಿತು.
೪೬೨ ಏಕಾದಶೀ ಮನೆಗೆ ಶಿವರಾತ್ರಿ ಔತಣಕ್ಕೆ ಬಂತು.
೪೬೩ ಏನಯ್ಯ ಅಂದರೆ ಶ್ವಾನನ ಮರಿ ಸತ್ತು ಹೋಯಿತು ಅಂದ.
೪೬೪ ಏನಾದರೂ ಮಾಡಿದರೆ ಹ್ಯಾಗಾದರೂ ಆಗುವದು.
೪೬೫ ಏನು ಮಾಡಿದರೂ ಮಗ ಹರಿ ಯೆಂಬದನ್ನು ಬಿಡ.
೪೬೬ ಏನು ಅರಿಯದವ ಶ್ವಾನಕ್ಕಿಂತ ಕಡೆ.
೪೬೭ ಏನೂ ಇಲ್ಲದವ ಯಾವದಕ್ಕೊ ಹೇಸ.
೪೬೮ ಏರಿಗೆ ನೀರಿನಾಶೆ, ನೀರಿಗೆ ಏರಿಯಾಶೆ.
೪೬೯ ಏರಿದವ ಇಳಿದಾನು.
೪೭೦ ಏಸು ಕೇಳಿದರೂ ನಾಶ ತಪ್ಪದು.
೪೭೧ ಏಳದಿದ್ದರೆ ನಾಲೆಗೆ ಹೋಗ ಬೇಕು.
೪೭೨ ಏಳಲಾರದ ಅಜ್ಜಿಗೆ ಚೇಳು ಕಚ್ಚಿ ತಂತೆ.
೪೭೩ ಏಳಲಾರದ ಯೆತ್ತು ಮೆಳೆ ಮೇಲೆ ಬಿತ್ತು.
೪೭೪ ಐಗಳೆ ಐಗಳೇ ಐದರ ಅಂಕೆ ನೀವೇ ಬರದರೆ ಥಂದ.
೪೭೫ ಒಂಟೆಗೆ ಸೊಂಟವೇನು, ಕುತ್ತಿಗೆ ಯೇನು. [ಕಡೆ.
೪೭೬ ಒಂದರಸು ಮತ್ತೊಂದೂರಿಗೆ ಹೋದರೆ ಕರುಕಟ್ಟೋ ಗೂಟಕ್ಕಿಂತ
೪೭೭ ಒಂದು ಅತ್ತೇ ಕಾಲ, ವೊಂದು ಸೊಸೇ ಕಾಲ. [ಯಾ ಮುದಿ ಗೂಬೆ.
೪೭೮ ಒಂದು ಕಂಚಾಯಿತು ವೊಂದು ಮಿಂಚಾಯಿತು ಮುಂದೆ ಕೂತಿ
೪೭೯ ಒಂದು ಮಳೆಗೆ ವೊಂದು ಕೊಡೆ ಹರಿಯ ಬಾರದು. [ತೀರದು.
೪೮೦ ಒಂದು ಶಿಟ್ಟೀಲಿ ಭಾವೀಲಿ ಬಿದ್ದರೆ ಯೇಳು ಶಿಟ್ಟಿನಿಂದ ಯೇಳ
೪೮೧ ಒಕ್ಕಲಿಗನ ನೆಂಟು ವೊಡವೆಗೇಡು.
೪೮೨ ಒಕ್ಕಳ ಹೊನ್ನಿನ ಪರದೇಶಿ.

೪೮೩ ಒಗಟು ಮಾತಿಗೆ ಸಟಗಾ ತಂದ.

೪೮೪ ಒಡಕು ಡೋಣಿಗೆ ಗಿಡ್ಡ ಜಲ್ಲು.

೪೮೫ ಒಡಲುರಿಯೊಂದು ಕಡೆ, ಬ್ರಹ್ಮೇತಿ ಕಾಟ ವೊಂದು ಕಡೆ.

೪೮೬ ಒಡೆಯನ ಕಂಡರೂ ಬಡತನ ಹೋಗಲಿಲ್ಲ.

೪೮೭ ಒಡ್ಡರಲ್ಲಿ ದಡ್ಡನಾಗ ಬಾರದು.

೪೮೮ ಒಣಗಿದ ಕಾಡಿಗೆ ಕಿಚ್ಚು ಬಿದ್ದ ಹಾಗೆ.

೪೮೯ ಒಪ್ಪಿತದ ಮಾತು ತಪ್ಪಿಸ ಬಾರದು.

೪೯೦ ಒಪ್ಪಾನೆ ಅಕ್ಕಿಗೆ ಇಪ್ಪಾನೆ ಉಪ್ಪೋ.

೪೯೧ ಒಬ್ಬ ಕೆಟ್ಟರೆ ಹಬ್ಬ ಕೆಟ್ಟೀತೇ.

೪೯೨ ಒಬ್ಬ ಭೋಗಿಯಾದರೆ ವೊಬ್ಬ ಜೋಗಿ.

೪೯೩ ಒಮ್ಮೆ ನಮ್ಮನೆಯಕ್ಕಿಯ ಕೊಟ್ಟು ಅಮ್ಮಾ ನಿಮ್ಮನೇ ಪ್ರಸಾದವೇ.

೪೯೪ ಒರಟಿನಿಂದ ಹರಟೆ ಉಂಟಾಗುವದು.

೪೯೫ ಒರಳಲ್ಲಿ ಕೂತರೆ ವೊನಕೇ ಪೆಟ್ಟು ತಪ್ಪೀತೇ.

೪೯೬ ಒರಳು ಹೋಗಿ ಮದ್ದಳೆ ಸಂಗಡ ಹೇಳಿದ ಹಾಗೆ.

೪೯೭ ಒಲಪು ಗಾತಿಗೆ ಮನೆ ಯೆಲ್ಲಾ ಹಿತ್ತಲು.

೪೯೮ ಒಲೆ ಸೊಟ್ಟಾದರೆ ಬದನೆ ಕಾಯಿ ಬೇಯದೇ.

೪೯೯ ಒಲ್ಲದ ಗಂಡಗೆ ಬೆಣ್ಣೇಲಿ ಕಲ್ಲು.

೫೦೦ ಒಲ್ಲಿಯಲ್ಲೇ ಮುಂಡಾಸು ಮಾಡು.

೫೦೧ ಒಳ್ಳೇ ಮಾತಿಗೆ ಸುಳ್ಳೇ ಪ್ರಧಾನ.

೫೦೨ ಒಳ್ಳೆಯವರ ಮಾನ ಹಳ್ಳೀಲಿ ಹೋಗುವದು.

೫೦೩ ಓಟಾ ವೋಡಿದರೂ ಕಾಟ ತಪ್ಪದು.

೫೦೪ ಓಡಿ ಸಿಕ್ಕ ಬೇಡ, ಆಡಿ ತಪ್ಪ ಬೇಡ.

೫೦೫ ಓಡಿ ಹೊಗುವ ಬಡ್ಡಿ ಹಾಳಿಗೆ ಹೆಪ್ಪು ಹಾಕ್ಯಾಳೇ.

೫೦೬ ಓಡುವವನ ಕಂಡರೆ ಅಟ್ಟುವವಗೆ ಘನ.

೫೦೭ ಓತೀ ಕಾಟಕ್ಕೆ ಬೇಲಿ ಸಾಕ್ಷಿ.

೫೦೮ ಓದಿದವನು ಛೇದಾ ತಿಳಿದಾನು.

೫೦೯ ಓದಿಯೋದಿ ಮರುಳಾದ ಕೋಚು ಭಟ್ಟ.

೫೧೦ ಓದೋದು ಶಾಸ್ತ್ರ, ಇಕ್ಕೋದು ಗಾಳ.

೫೧೧ ಓಮು ತಿಂದ ಕತ್ತೇ ಹಾಗೆ.

೫೧೨ ಓಮು ತಿಂದರೆ ಕ್ಷಾಮ ಹೋದೀತೇ.

೫೧೩ ಔಟು ಇದ್ದವನಿಗೆ ಸಾಟಿದಿಂದ ಹೊಡೆದ ಹಾಗೆ.

೫೧೪ ಔತಣಕ್ಕೆ ಹೋದರೆ ಅಪಮೃತ್ಯು ಬಂತು.

೫೧೫ ಕಂಕುಳಲ್ಲಿ ದೊಣ್ಣೆ, ಕೈಯಲ್ಲಿ ಸಲಾಮು. [ಬೋಳಿಸದೇ ಬಿಡರು.

೫೧೬ ಕಂಡ ಕಂಡವರಿಗೆಲ್ಲಾ ಹಲ್ಲು ಕಿರಿದರೂ ಗಂಡ ಸತ್ತ ಮುಂಡೆಗೆ

೫೧೭ ಕಂಡ ದೇವರಿಗೆಲ್ಲಾ ಕೈಮುಗಿದರೂ ಗಂಡನಿಲ್ಲದೆ ಮಕ್ಕಳಾಗದು.

೫೧೮ ಕಂಡದ್ದಲ್ಲ ಕೇಳಿದ್ದಲ್ಲ ಗಂಡನ ಸೋದರ.

೫೧೯ ಕಂಡದ್ದು ಬಿಡದು, ಮುಂಡೇ ದೈವ.

೫೨೦ ಕಂಡದ್ದು ಮಾತಾಡಿದರೆ ಕೆಂಡದಂಥಾ ಕೋಪ.

೫೨೧ ಕಂಡರೆ ಕಣ್ಣುರಿ, ಕಾಣದಿದ್ದರೆ ಹೊಟ್ಟೇ ಉರಿ.

೫೨೨ ಕಂಡರೆ ಕೋಪ, ಕಾಣದಿದ್ದರೆ ತಾಪ.

೫೨೩ ಕಂಡರೆ ಮಾಣಿ, ಉಂಡರೆ ಗೋಣಿ.

೫೨೪ ಕಂಡರೆ ಶೇರದವನಿಗೆ ಉಂಡರೆ ಶೇರಿತೇ.

೫೨೫ ಕಂಡರೆ ಸುಂಕ, ಕಾಣದಿದ್ದರೆ ಬಿಂಕ.

೫೨೬ ಕಂಡವರ ಕಾಲು ಹಿಡಿದರೂ ಗಂಡನ ಮನೆಗೆ ಹೋಗೋದು ತಪ್ಪದು.

೫೨೭ ಕಂಡವರ ಮಕ್ಕಳನ್ನ ಭಾವೀಲಿ ದೂಡಿ ಆಳಾ ನೋಡಿದ ಹಾಗೆ.

೫೨೮ ಕಂಡು ದಣಿದೆಯೋ, ಉಂಡು ದಣಿದೆಯೋ.

೫೨೯ ಕಂತೆಗೆ ತಕ್ಕ ಬೊಂತೆ.

೫೩೦ ಕಂಬಳಿಯ ಮೇಲೆ ಕಣಿಕಾ ನಾದಿದ.

೫೩೧ ಕಂಬಳಿಯವನ ಹೊಡದು ಹಚ್ಚಡದವನ ಹೆದರಿಸ ಬೇಕು.

೫೩೨ ಕಚ್ಚೋ ನಾಯಿ ಬೊಗಳದು, ಬೊಗಳೋ ನಾಯಿ ಕಚ್ಚದು.

೫೩೩ ಕಚ್ಚೋ ನಾಯಿಯ ಮುಂದೆ ಖಂಡುಗ ಹಾಕಿದ

೫೩೪ ಕಜ್ಜಿ ಇದ್ದದನಿಗೆ ಲಜ್ಜೆ ಇಲ್ಲ, ಅಜ್ಜಿ ಇದ್ದವನಿಗೆ ಯೋಚನೆ ಇಲ್ಲ.

೫೩೫ ಕಟ್ಟೆ ಕೊಂಡು ರಾಜ್ಯ ಕೊಡುತ್ತಾರೆ.

೫೩೬ ಕಟ್ಟಿದ ಮನೆ ಮೆಟ್ಟಲಿಲ್ಲ, ಅಟ್ಟಿ ಕೊಂಡು ಬಂದೆಯೋ ಯಮನೇ.

೫೩೭ ಕಟುಕರ ಮನೆಯ ಕುರಿಯ ಹಾಗೆ.

೫೩೮ ಕಟ್ಟೆ ಹರಿದ ಪಂಜು.

೫೩೯ ಕಡಗ ಇದ್ದವಳು ಕಡಗೋಲು ಹಿಡಿಯಲಾರಳೇ.

೫೪೦ ಕಡ ಸಿಕ್ಕೋದಾದರೆ ಹಡಗ ನನಗಿರಲಿ ಅಂದ.

೫೪೧ ಕಡ ಹುಟ್ಟಿ ಬಡವ ಕೆಟ್ಟ.

೫೪೨ ಕಡಿದವನ ಪಾಪ ಖಡ್ಗ ಮಾಡಿದವನಿಗುಂಟೇ.

೫೪೩ ಕಡುಕೋಪ ಬಂದಾಗ ತಡ ಕೊಂಡವನೇ ಜಾಣ.

೫೪೪ ಕಡ್ಲೆಗೆ ಬಾಯಿ ತೆರದು ಕಡಿವಾಣಕ್ಕೆ ಬಾಯಿ ಮುಚ್ಚಿದರೆ ಆದೀತೇ.

೫೪೫ ಕಡ್ಲೆಗೆ ಮುಂದು, ಕಡಿವಾಣಕ್ಕೆ ಹಿಂದು.

೫೪೬ ಕಡ್ಲೆ ಇದ್ದವರಿಗೆ ಹಲ್ಲಿಲ್ಲ, ಹಲ್ಲಿದ್ದವರಿಗೆ ಕಡ್ಲೆ ಇಲ್ಲ.

೫೪೭ ಕಡ್ಲೇ ತಿಂದು ಕೈ ತೊಳದ ಹಾಗೆ.

೫೪೮ ಕಡ್ಲೇ ಸಂಗಡ ರಾಗಿ ಕೂಡಿ ಹುರಿದ ಹಾಗೆ.

೫೪೯ ಕಣ್ಣಾರೆ ಕಂಡರೂ ಪರಾಮ್ಕರಿಸಿ ನೋಡ ಬೇಕು.

೫೫೦ ಕಣ್ಣಿನಷ್ಟು ಪ್ರಕಾಶವಿಲ್ಲ, ಮಣ್ಣಿನಷ್ಟು ಆಧಾರವಿಲ್ಲ.

೫೫೧ ಕಣ್ಣು ಕಾಣದ ಹೊಟ್ಟೆಗೆ ಮಣ್ಣೇನು, ಮಶಿ ಯೇನು.

೫೫೨ ಕಣ್ಣು ಕೊಂಡೋದ ದೈವ ಮತ್ತೇ ಕೊಟ್ಟಿತು.

೫೫೩ ಕತ್ತಲೇ ಗುದ್ದ್ಯಾಟ.

೫೫೪ ಕತ್ತಿಗೆ ಮೆತ್ತಿದ ಜೇನು.

೫೫೫ ಕತ್ತೆ ಕಂಡಗ ಹೊತ್ತರೆ ಶೆಟ್ಟಿತನಾ ಮಾಡೀತೇ.
೫೫೬ ಕತ್ತೆ ಕಸ್ತೂರಿ ಹೊತ್ತ ಹಾಗೆ.
೫೫೭ ಕತ್ತೆಗೆ ಕುದುರೆ ಸೋದರಮಾವನೇ.
೫೫೮ ಕತ್ತೆಗೆ ಭಾಗ್ಯ ಕಸ್ತೂರಿ ಹೊರುವದೇ.
೫೫೯ ಕತ್ತೆಗೆ ಯಾಕೆ ಕಾಲು ಕಡಗ. [ನಭೋಗನ ಮಿಂಡ.
೫೬೦ ಕತ್ತೆ ಚಿತ್ರಗಾರನ ಮಿಂಡ ಹಣ ನೋಟಗಾರನ ಮಿಂಡ ಠವಣೆ ಶಾ
೫೬೧ ಕತ್ತೆ ತಪ್ಪಿಸಿ ಕೊಂಡರೆ ಹಾಳು ಗೋಡೆ.
೫೬೨ ಕತ್ತೆ ತಿಂದೂ ಹಾಳು, ಹೊರಳೀ ಹಾಳು.
೫೬೩ ಕತ್ತೆ ಬಲ್ಲದೇ ಭತ್ತದ ಸುಗ್ಗಿಯು.
೫೬೪ ಕತ್ತೆ ಬೆಲ್ಲಾ ಹೇತರೆ ಡೊಂಬಗೆ ಯಾಕೆ ಬಿಕ್ಕೆ.
೫೬೫ ಕತ್ತೆ ಮೇದಲ್ಲಿ ಮತ್ತೆ ಮೇವಿಲ್ಲ.
೫೬೬ ಕತ್ತೆ ಮೊಸರನ್ನದ ರುಚೀ ಬಲ್ಲದೇ.
೫೬೭ ಕತ್ತೆ ಸತ್ತರೆ ಹಾಳು ಗೋಡೆ.
೫೬೮ ಕತ್ತೇಕುರುಬ ಯೆಲುಗಳನ್ನು ಕೂಡಿಸಿದ ಹಾಗೆ. [ಬೇಕು.
೫೬೯ ಕತ್ತೇ ಮೇಲೆ ಅತ್ತೆ ಯೇರಿದರೆ ಕೊಡೇ ಹಿಡೀಲಿಕ್ಕೆ ಮಾವ ಬರ
೫೭೦ ಕತ್ತೇ ಮೊಲೆಯಲ್ಲಿ ಖಂಡುಗ ಹಾಲಿದ್ದರೇನು.
೫೭೧ ಕಥೆ ಕೇಳಿದರೆ ವ್ಯಥೆ ಹೋಗುವದೇ.
೫೭೨ ಕಥೆಗೊಂದು ಕಾಲುಂಟೇ.
೫೭೩ ಕದಾ ತಿಂಬುವನಿಗೆ ಹಪ್ಪಳ ಈಡೇ.
೫೭೪ ಕದ್ದು ತಿಂಬುವದಕ್ಕಿಂತಾ ಬೇಡಿ ತಿಂಬುವದು ಲೇಸು.
೫೭೫ ಕದ್ದು ಮದುವೆ ಮಾಡುತ್ತೇನೆ, ಮತ್ತೆ ಬೇಕಾದರೆ ಕೊಲ್ಲು.
೫೭೬ ಕನಕನ ಕವಿತ್ವ ತಿಣಿಕಿದರೂ ಸಿಕ್ಕದು.
೫೭೭ ಕನಸಿನ ನೆಂಟು, ಕನಡೀ ವೊಳಗಣ ಗಂಟು. [ಮುಡೀಕಟ್ಟಿ ಕೊಂಡ.
೫೭೮ ಕನ್ನಂಬಾಡಿಯಲ್ಲಿ ಕಂಬಳೀ ಕಿತ್ತು ಕೊಂಡರೆ ಬಲಮುರಿಯಲ್ಲಿ ಹಲ್ಲು

೪೭೯ ಕನ್ನವಿಡುವ ಕಳ್ಳನಿಗೆ ಮನ್ನಿಸಿ ತಂದನಂತೆ.

೪೮೦ ಕಪಿ ಮುಷ್ಟಿ ಹಿಡಿದ ಹಾಗೆ.

೪೮೧ ಕಪೀ ಕುಣಿಸಿ ಕಲ್ಲು ಕರಗಿಸಿದ ಹಾಗೆ.

೪೮೨ ಕಪ್ಪೆ ಕೂಗಿ ಮಳೇ ಬರಿಸಿದ ಹಾಗೆ.

೪೮೩ ಕಪ್ಪೆಯ ತುಲಾಭಾರಾ ಕೊಟ್ಟ ಹಾಗೆ.

೪೮೪ ಕಬ್ಬಿಣದ ಹೊಟ್ಟೇಲಿ ಸುಲಂಗಿ ಹುಟ್ಟಿದ ಹಾಗೆ.

೪೮೫ ಕಬ್ಬಿಣಾ ಒಡಿಯುವಲ್ಲಿ ಕಾಗೆಗೇನು.

೪೮೬ ಕಬ್ಬಿನ ಮೇಲೆ ಜೇನು ಇಕ್ಕಿದಂತೆ. [ಯೊಂದೇ.

೪೮೭ ಕಬ್ಬು ಕೊನೆಯಿಂದ ಮೆದ್ದರೂ ಬುಡದಿಂದ ಮೆದ್ದರೂ ಸವಿ

೪೮೮ ಕಬ್ಬು ಡೊಂಕಾದರೆ ಸವಿ ಡೊಂಕೇ.

೪೮೯ ಕಬ್ಬು ಶೀಯಂತ ಬುಡ ಪರಿಯಂತರ ಅಗಿಯ ಬಾರದು.

೪೯೦ ಕಮ್ಮಗೆ ಉಣಿಸಿ ಬಿಮ್ಮಗೆ ಕಟ್ಟಿದ.

೪೯೧ ಕಮ್ಮಾರ ಸಾಲೆಗೆ ಸೂಜೀ ಕೊಂಡು ಹೋದ ಹಾಗೆ.

೪೯೨ ಕರಕರೇ ದೇವರಿಗೆ ಕಾಯಿಕಾಯಿ ಹಣ್ಣು.

೪೯೩ ಕರಡಿಗೆ ಕೂದಲು ಯಾವದು, ರೋಮ ಯಾವದು.

೪೯೪ ಕರಡೀ ಕೈಗೆ ಹೆದರದವ ಕರೀಕಂಬಳಿಗೆ ಹೆದರ್‍ಯಾನೇ.

೪೯೫ ಕರಣ ತಪ್ಪಿದರೆ ಮರಣ. [ಬಗೆಯ ಬೇಡ.

೪೯೬ ಕರದರೆ ಉಣ್ಣು, ತೆರದರೆ ಮುಚ್ಚು, ಶೇರಿದ ವೊಡೆಯುಗೆ ಯೆರಡ

೪೯೭ ಕರದು ಹೆಣ್ಣು ಕೊಟ್ಟರೆ ಮಲನಾಗರು ಹಿಡೀತು.

೪೯೮ ಕರೀಬ್ರಾಹ್ಮಣನ ನಂಬ ಬಾರದು ಬಿಳೀ ಹೊಲೆಯನ ನಂಬ ಬಾರದು.

೪೯೯ ಕರುಳು ವೊಂದಾದರೇನು, ಮರುಳು ವೊಂದೋ.

೫೦೦ ಕರೂ ಕೂಡಿ ಕದಾ ಮುಚ್ಚಿದಂತೆ.

೫೦೧ ಕರೆಯುವ ಹಸಾ ಕೊಟ್ಟು ವೊದೆಯುವ ಕತ್ತೇ ತಂದ ಹಾಗೆ.

೫೦೨ ಕಲಕಾಲ ದಾಸಯ್ಯನಾದರೆ ತಿರುಮಂತ್ರಾ ಹೇಳ್ಯಾನು.

೬೦೩ ಕಲ್ಲಪ್ಪನೂ ಗುಂಡಪ್ಪನೂ ಕೂಡಿ ಮೆಣಸಪ್ಪ ಹುಡಿ.

೬೦೪ ಕಲ್ಲಲ್ಲಿಟ್ಟವನ ಬೆಲ್ಲದಲ್ಲಿಡ ಬೇಕು.

೬೦೫ ಕಲ್ಲಾದರೇನು ಗುಂಡಾದರೇನು, ತಲೇ ವೊಡೆಯಲಿಕ್ಕೆ.

೬೦೬ ಕಲಿತ ಬಡ್ಡಿ ಹಾಡದೆ ಬಿಟ್ಟಾಳೇ.

೬೦೭ ಕಲ್ಲು ಕರಗಿ ಪಾತ್ರೆಯಾದ ಹಾಗೆ.

೬೦೮ ಕವಿ ಕಂಡಷ್ಟು ರವಿ ಕಾಣ.

೬೦೯ ಕಸಾ ಗುಡಿಸು ಅಂದರೆ ಬಸಬಸ ಸುರೀತೋ.

೬೧೦ ಕಳ್ಳ ಕಳ್ಳಗೆ ನಂಟು, ಹುಳಿ ಮೆಣಸಿಗೆ ನಂಟು.

೬೧೧ ಕಳ್ಳ ಕಳ್ಳಗೆ ಬಲ್ಲ.

೬೧೨ ಕಳ್ಳ ಕಳ್ಳರು ಕೂಡಿ ಸಂತೇ ಕಟ್ಟಿದ ಹಾಗೆ.

೬೧೩ ಕಳ್ಳಗೆ ಕಡುನಾಲಿಗೆ, ಹಾದರಗಿತ್ತಿಗೆ ಹಲವು ನಾಲಿಗೆ.

೬೧೪ ಕಳ್ಳಗೆ ಚೇಳು ಬಡಿದ ಹಾಗೆ.

೬೧೫ ಕಳ್ಳಗೆ ಸಂದು ಕೊಟ್ಟು ವೊಡವೆಗೆ ಹುಯ್ಯಲಿಕ್ಕಿದ.

೬೧೬ ಕಳ್ಳನ ತಾಯಿಯ ಸಂಗಡ ಕಣೀ ಕೇಳಿದ ಹಾಗೆ.

೬೧೭ ಕಳ್ಳನ ಹೆಂಡತಿ ಯೆಂದಿದ್ದರೂ ಮುಂಡೆ.

೬೧೮ ಕಳ್ಳನ ಹೆಜ್ಜೇ ಕಳ್ಳ ಬಲ್ಲ.

೬೧೯ ಕಳ್ಳ ಬಂಟ ವೊಡೆಯಗೆ ಹಿತ.

೬೨೦ ಕಳ್ಳರಲ್ಲಿ ಕಡುಕಳ್ಳರು ಹೊಕ್ಕ ಹಾಗೆ.

೬೨೧ ಕಳ್ಳ ಹೊಕ್ಕ ಮನೆಗೆ ಯೆಣ್ಣೆ ದಂಡ.

೬೨೨ ಕಳ್ಳ ಹೊನ್ನಿಗೆ ದೊಡ್ಡ ಮುದ್ರೆ.

೬೨೩ ಕಾಕು ಮಾತು ಆಡ ಬೇಡ, ಪೋಕವಿದ್ಯೆಗೆ ಹೋಗ ಬೇಡ.

೬೨೪ ಕಾಗೆ ಕೋಗಿಲೇ ಹಾಗಿದ್ದರೂ ರಾಗದಲ್ಲಿ ಭೇದವಿಲ್ಲವೇ.

೬೨೫ ಕಾಜಿ ಪಾಜಿ, ಪಾಜಿ ಕಾಜಿ. [ಚೇಲ.

೬೨೬ ಕಾಟನಾಯ್ಕನ ಮನೆಗೆ ಕನ್ನಾ ಹಾಕಿದರೆ ನೇತಾಡುವದೆರಡು ಭಂಗೀ

೬೨೭ ಕಾಡಕೋಳಿಗೆ ಮಕರಸಂಕ್ರಾಂತಿಯೇ.
೬೨೮ ಕಾಡಲ್ಲಿ ಹೊಂಬಾಳೆ ಬಯಸಿದ ಹಾಗೆ,
೬೨೯ ಕಾಡಿಗೆ ಅತ್ತು ಕಣ್ಣು ಪೋಟಿ ಹೋಯಿತು.
೬೩೦ ಕಾಡಿನಲ್ಲಿ ತಿರುಗಿ ಕಟ್ಟಿಗೆ ಇಲ್ಲಾ ಅಂದ ಹಾಗೆ.
೬೩೧ ಕಾಡಿನಲ್ಲಿ ಹುಲಿ ಕೂಗಿದರೆ ನಾಡಿನಲ್ಲಿ ಪೊಕ್ಕಲು ತೆಗದರಂತೆ.
೬೩೨ ಕಾಡುವ ಬ್ರಹ್ಮಣಗೆ ನಾರುವ ಉಪ್ಪಿನಕಾಯಿ.
೬೩೩ ಕಾಣದ ಮುರುವ ಕನಸ ಕಂಡರೆ ಯೇಳು ಬಾರಿ ಯೆದ್ದು ಕೂತ.
೬೩೪ ಕಾದ ಹಾಲು ಕಹಿಯಾದೀತೇ.
೬೩೫ ಕಾಮನ ಹುಣ್ಣುಮೆಗೆ ಕಲಕನೀರು.
೬೩೬ ಕಾರಣವಿಲ್ಲದ ಕಾರ್ಯವಿಲ್ಲ, ಮೂರಣವಿಲ್ಲದ ಮಾಟವಿಲ್ಲ.
೬೩೭ ಕಾರಮಳೆ ಬಿದ್ದರೂ ಕಾರ್ಯವಿಲ್ಲ.
೬೩೮ ಕಾರ್ಯ ವಾಸಿ ಕತ್ತೇ ಕಾಲು ಕಟ್ಟು.
೬೩೯ ಕಾಲ ಕೆಟ್ಟಿತು, ಕಾಗೆ ರಾಗೀ ತಿಂತು.
೬೪೦ ಕಾಲಕ್ಕೆ ತಕ್ಕ ಕೋಲ.
೬೪೧ ಕಾಲ ತೊಂತಿದ ಹಾವು ಕಚ್ಚದೇ ಬಿಡದು.
೬೪೨ ಕಾಲಿದ್ದವರು ಕಾಸಿಗೆ ಹೋದರೆ ನೀನೆಲ್ಲಿ ಹೋದೀ ಕುಂಟಮುರುವ.
೬೪೩ ಕಾಸು ಇದ್ದರೆ ಕೊಡಿಯಾಲ, ಇಲ್ಲದಿದ್ದರೆ ನಡಿಯಲ.
೬೪೪ ಕಾಸು ಬಿಟ್ಟವ ದೇಶಾ ಬಿಟ್ಟಾನು.
೬೪೫ ಕಿಂಚಿತದಲ್ಲಿ ವಂಚನೆ ಯೇನು.
೬೪೬ ಕಿಚ್ಚಿಗಂಜದವ ಬೂದಿಗಂಜಾನೇ.
೬೪೭ ಕಿಚ್ಚು ನುಂಗುವವ ನುಚ್ಚು ಬಿಟ್ಟಾನೇ.
೬೪೮ ಕಿಟಕಿಯಿಂದ ನುಸುಳುವವ ಹೆಬ್ಬಾಗಿಲಿಂದ ಬಾರನೇ.
೬೪೯ ಕಿಡಿಯಿಂದ ಕಾಡು ಸುಡ ಬಹುದು.
೬೫೦ ಕಿರಿದಿನಲ್ಲೇ ಪಲ್ಲಕ್ಕೀ ಸೇವೆ.

೬೫೧ ಕಿಲಬಿನ ಬಟ್ಟಲಲ್ಲಿ ಹುಳೀ ಕಲಿಸಿ ಉಣ್ಣ ಬಹುದೇ.
೬೫೨ ಕಿವಿಕಿತ್ತ ಮೂಳಿ ಬೇಲಿ ನುಗ್ಗ ಹೆದರುವಳೇ.
೬೫೩ ಕಿವಿ ಕೇಳದಿದ್ದರೆ ಕೈ ಮೋಗುಚದೇ.
೬೫೪ ಕಿವುಡ ಯಜಮಾನಗೆ ಮೂಗ ಬಂಟ.
೬೫೫ ಕಿಸವಾಯನ ಕಂಡರೆ ಬಿಡದೇ ಬೇಹಾರ.
೬೫೬ ಕಿಸೆಯಲ್ಲಿ ಅಯುಧವಿದ್ದು ನಸೆ ಯೆಂದು ತಿಳಿಯ ಬಹುದೇ.
೬೫೭ ಕೀಟ ಸಣ್ಣದಾದರೂ ಕಾಟ ಬಹಳ.
೬೫೮ ಕೀಲು ಸಣ್ಣದಾದರೂ ಗಾಮೀ ನಡಸುತ್ತದೆ.
೬೫೯ ಕೀಳ ಕೆಣಕ ಬೇಡ, ಮೇಗಾಲು ತುರಿಸ ಬೇಡ.
೬೬೦ ಕೀಳ ಕೆಣಕ ಬೇಡ, ಹಾಳ ಮೆಟ್ಟ ಬೇಡ.
೬೬೧ ಕುಂಕುಮ ಕೆಂಪಾಗಿದ್ದರೂ ಸಂಪಿಗೇ ವರ್ಣವೇ.
೬೬೨ ಕುಂಗಿದ್ದವನನ್ನು ನುಂಗ ನೋಡುವರು.
೬೬೩ ಕುಂಟಗೆ ಯೆಂಟು ಚೇಷ್ಟೆ, ಕುರುಡಗೆ ಹದಿನಾರು ಚೇಷ್ಟೆ.
೬೬೪ ಕುಂಟಗೆ ಸೊಂಟದಲ್ಲಿ ತ್ರಾಣ.
೬೬೫ ಕುಂಟನಾದರೂ ವೊಂಟೆಯ ಜೋಕೆ ಬಹಳ.
೬೬೬ ಕುಂಟೆ ಕೊಳ್ಳುತ್ತಾ ತಂಟೆ ತೀರಿಸ್ಯಾನು.
೬೬೭ ಕುಂಡೆ ಬೆಳದರೆ ಗೌಡನಾದಾನೇ.
೬೬೮ ಕುಂಡೆ ಭಟ್ಟ ಇಟ್ಟದ್ದೇ ಮುಹೂರ್ತ.
೬೬೯ ಕುಂಡೇ ಭಟ್ಟನ ಚಂಡು ಕಂಡವರಿಗುಂಟು, ಕಾಣದವರಿಗಿಲ್ಲ.
೬೭೦ ಕುಂಡೇ ಮೇಲೆ ಬಡಿದರೆ ದವಡೇ ಹಲ್ಲು ಉದರೀತೇ.
೬೭೧ ಕುಂದಿದವನಾದರೂ ಮಂದನಾಗಿರ ಬಾರದು.
೬೭೨ ಕುಂಬಳಕಾಯಿ ಕಳ್ಳ ಅಂದರೆ ಭುಜಾ ಮುಟ್ಟಿ ನೋಡಿದ ಹಾಗೆ.
೬೭೩ ಕುಂಬಾರನ ಆವಿಗೆಯಲ್ಲಿ ತಾಂಬ್ರದ ಚಂಬು ಹುಡುಕಿದಂತೆ.
೬೭೪ ಕುಂಬಾರಗೆ ವರುಷ ದೊಣ್ಣೇಗೆ ನಿಮಿಷ.

೬೭೫ ಕುಜೋದ್ಯದ ಅರಸಗೆ ಕುಲಗೇಡಿ ಪ್ರಧಾನಿ.
೬೭೬ ಕುಜನರ ಸಂಗ ಅಜಗೂ ತಕ್ಕದ್ದಲ್ಲ.
೬೭೭ ಕುಟ್ಟೀಲಾರದ ಬಡ್ಡಿ ಉದ್ಯೋದಿ ನೋಡಿದಳಂತೆ.
೬೭೮ ಕುಡಿಯುವ ಪಾನಕದಲ್ಲಿ ಕಡ್ಡಿ ಸಿಕ್ಕಿದ ಹಾಗೆ.
೬೭೯ ಕುಡೀಕಿತ್ತರೂ ಅಡಿ ಸಾಯುವದೇ.
೬೮೦ ಕುಣಿಯಲಿಕ್ಕೆ ತಿಳಿಯದಿದ್ದರೆ ಅಂಗಳ ವೋರೆ.
೬೮೧ ಕುಣಿಯುವಾಗ ಮುಸುಕೇ.
೬೮೨ ಕುಣಿ ಅಗಿಸಿದರೆ ಋಣ ತೀರಿತೇ.
೬೮೩ ಕುತ್ತಿಗೆ ಕೊಯ್ಯ್ಯೇ ಊರಲ್ಲಿ ಸುಲದು ಬಿಟ್ಟದೇ ಗುಣ.
೬೮೪ ಕುದುರೇ ಹಿಂದಿರ ಬೇಡ, ಹಾರುವನ ಮುಂದಿರ ಬೇಡ.
೬೮೫ ಕುಪ್ಪನ ನಂಬಿ ಕೊಳಕೇ ಬಿತ್ತಿದೆ, ಕುಪ್ಪ ವೋಡಿ ಹೋದ, ಕೊಳಕೆಹೊತ್ತು ಹೋಯ್ತು.
೬೮೬ ಕುಮಾರ ರಾಮನು ಸೋರೆಕಾಯಿ ತಿಂದ ಹಾಗೆ.
೬೮೭ ಕುರಿ ಸತ್ತು ಮೂರು ತಿಂಗಳಾಯಿತು, ತೊಗಲು ಹದಾ ನೋಡೆ.
೬೮೮ ಕುರಿ ಹೆಚ್ಚಿದಷ್ಟು ಕುರುಬಗೆ ಲಾಭ.
೬೮೯ ಕುರೀ ಹಿಂಡಿಗೆ ತೋಳ ಹಾರಿದ ಹಾಗೆ.
೬೯೦ ಕುರುಜು ಮೇರುವೆ ಇಲ್ಲ, ನೊರಜುಗಳ ಸ್ವರ ಹೆಚ್ಚು.
೬೯೧ ಕುರುಡ ಕಂಡರಿಯ, ಕಿವುಡ ಕೇಳ್ದರಿಯ.
೬೯೨ ಕುರುಡ ಕಣ್ಣು ಮುಚ್ಚಿದರೂ ವೊಂದೆ, ತೆರೆದರೂ ವೊಂದೇ.
೬೯೩ ಕುರುಡ ಕುದುರೆಗೆ ಹುರಿದ ಹುರುಳಿ.
೬೯೪ ಕುರುಡಗೆ ಹಗಲೇನು, ಇರುಳೇನು.
೬೯೫ ಕುರುಡ ದೂಮಗೆ ಶ್ರೀಮುದ್ರೆ ಸಿಕ್ಕಿದ ಹಾಗೆ.
೬೯೬ ಕುರುಡನ ಹೆಂಡತಿಗೆ ದೈವದ ಕಾವಲು.
೬೯೭ ಕುರುಡನಿಗೆ ತರಡಿನ ಮೇಲೆ ಕೈ.

೧೯೮ ಕುರುಡ ಭಟ್ಟರೇ ನಮಸ್ಕಾರಾ ಅಂದರೆ ಕುತಂತ್ರಕ್ಕೆ ಮೂಲವೋ
೧೯೯ ಕುರುಡ ಯೆತ್ತಿಗೆ ಕರಡವೇ ಕೈಲಾಸ. [ಅಂದ ಹಾಗೆ.
೨೦೦ ಕುರುಡರೊಳಗೆ ಮೆಳ್ಳನೇ ಶ್ರೇಷ್ಟ.
೨೦೧ ಕುರುಡಿಗೆ ಮದುವೆಯಾದರೆ ಮನೇ ಗಡಿಗೆಗೆ ಮೂಲಿ.
೨೦೨ ಕುರುಡೀ ಹಾದರ ಊರ ಉಬ್ಬಾಸ.
೨೦೩ ಕುರುಬನ ಕುರೀಹೋತ ಭಾವೀಲಿ ಬಿದ್ದ ಹಾಗೆ.
೨೦೪ ಕುರುಬನ ಮಂದೇ ತೋಳ ಕಾದ ಹಾಗೆ.
೨೦೫ ಕುರುವಿನಷ್ಟು ನೋವಿಲ್ಲ, ನೋಡ ಬರುವ ನಾರಿ ಇಲ್ಲ.
೨೦೬ ಕುಲಕ್ಕೆ ತಕ್ಕ ಬುದ್ಧಿ, ಆಹಾರಕ್ಕೆ ತಕ್ಕ ಲದ್ದಿ.
೨೦೭ ಕುಲಗೇಡಿಯ ಕೂಡೆ ಸರಸವೇ.
೨೦೮ ಕುಲಗೋತ್ರಕ್ಕೆ ಕಡಿಮೆಯಾದರೂ ಮಲಮೂತ್ರಕ್ಕೆ ಕಡಿಮೆ ಇಲ್ಲ.
೨೦೯ ಕುಲಪ್ರಮಾಣ ನಾಲಿಗೆ, ಜಲಪ್ರಮಾಣ ತಾವರೆ.
೨೧೦ ಕುಲವನ್ನು ನಾಲಿಗೆ ಹೇಳುವದು.
೨೧೧ ಕುಲವಿದ್ದರೂ ಮಲ ಹೋಗದು.
೨೧೨ ಕುಳವಾರು ಇಲ್ಲದ ಊರಿಗೆ ತಳವಾರ ಯೇನು ಮಾಡ್ಯಾನು.
೨೧೩ ಕುಳ್ಳನ ಕರೆಯ ಬಾರದು, ಕಳ್ಳನ ಕರೆಯ ಬಹುದು.
೨೧೪ ಕೂಗಟೆ ಹುಣ್ಣಾದರೆ ಜಾಗಟೇ ಬಡಿಯುವದಕ್ಕೆ ಆಗದೇ.
೨೧೫ ಕೂಗಿ ಹೇಳಿದರೆ ತೂಗುವ ತ್ರಾಸು ಕೇಳುತ್ತದೋ. [ವಳ್ಳೇ ಬಲ್ಲಿಳು.
೨೧೬ ಕೂಗೋ ಕೋಳಿಗೆ ಕುಂಡೇ ನೊಂದೀತೇ, ಯೆದ್ದು ರಾಗೀ ಬೀಸು
೨೧೭ ಕೂಡದ ಕೆಲಸಕ್ಕೆ ಮಾಡದ ಅಡಿಗೆ.
೨೧೮ ಕೂತರೂ ನಾತ ಹೋದೀತೇ, ಹೆತದಕ್ಕಿಂತ ಹೆಚ್ಚು.
೨೧೯ ಕೂತುಂಬುವನಿಗೆ ಕುಡಿಕೇ ಹಣ ಸಾಲದು.
೨೨೦ ಕೂಸು ಕಾಸು ಹೋಲದು, ಜೋಗುಳ ಮುಗಿಲು ಮುಟ್ಟಿತು.
೨೨೧ ಕೂಳ ಚೆಲ್ಲಿದ ಕಡೆ ಸಾವಿರ ಕಾಗೆ.

೭೨೨ ಕೂಳಿಕ್ಕುವವನೇ ವೊಡೆಯು, ಕೊಂಡು ಹೋಗುವವನೇ ಜವರಾಯ.
೭೨೩ ಕೆಂಡಕ್ಕೆ ಇರುವೆ ಮುತ್ತೀತೋ.
೭೨೪ ಕೆಟ್ಟ ಅಡಿಗೆ ಅಟ್ಟೋಳ್ಗೇ ಜಾಣೆ.
೭೨೫ ಕೆಟ್ಟ ಗದ್ದೆಗೆ ಮನೇ ನೆಲ್ಲು ಯೇರ ಹಾಕಿದರು.
೭೨೬ ಕೆಟ್ಟ ಭೂಮಿಗೆ ಮನೇ ದವಸಾ ಕೊಟ್ಟು ಕೂಲೀ ಮಾಡಿಸಿದ.
೭೨೭ ಕೆಟ್ಟ ಮುಂಡೆ ಕುಲಾ ಸೇರಳು.
೭೨೮ ಕೆಟ್ಟರೂ ಪಟ್ಟಣಾ ಸೇರ ಬೇಕು.
೭೨೯ ಕೆಟ್ಟವನೆನಿಸಿ ಕೊಂಡು ನೂರು ವರುಷ ಬಾಳ್ಳೋಕ್ಕಿಂತಲೂ ವೊಳ್ಳೆಯವನೆನಿಸಿ ಕೊಂಡು ಮೂರು ದಿವಸವಿದ್ದರೆ ಸಾಲದೇ.
೭೩೦ ಕೆಟ್ಟವರಿಗೂ ಅಳಿದವರಿಗೂ ಗೊಟ್ಟಕೆರೆ ತವರಮನೆ.
೭೩೧ ಕೆಟ್ಟಾಡಿ ಹೊಟ್ಟೇ ಹೊರೆಯುವನಿಗೆ ಕೊಟ್ಟ ಸಾಲ ಬರುವದಿಲ್ಲ.
೭೩೨ ಕೆಟ್ಟು ನಂಟರ ಸೇರ ಬೇಡ, ಕೊಟ್ಟ ಧರ್ಮಾ ತಿರುಗ ಕೇಳ ಬೇಡ.
೭೩೩ ಕೆಟ್ಟು ಮುರಿದವರೆಲ್ಲಾ ಹುಚ್ಚ್ರಾಯನ ಗುಡೀ ಸೇರಿ.
೭೩೪ ಕೆಮ್ಮಿನಿಂದ ಹೂಸು ಮರಸಿದ.
೭೩೫ ಕೆರದ ಅಳತೆಗೆ ಕಾಲು ಕೊಯಿಸಿದ ಹಾಗೆ.
೭೩೬ ಕೆರೆ ವೊಡದವನ ಕೈಯಿಂದ ಕಂಬಳೀ ಕಿತ್ತು ಕೊಂಡ.
೭೩೭ ಕೆರೇ ಮುಂದೆ ಅರವಟ್ಟಿಗೆಯೇ.
೭೩೮ ಕೆಲಸಗಳ್ಳಿತಿಗೆ ಕೂಸು ಹುಟ್ಟಿದ ಹಾಗೆ.
೭೩೯ ಕೆಲಸವಿಲ್ಲದ ಕುಂಬಾರ ಮಕ್ಕಳ ಕುಂಡೇ ತಟ್ಟಿದ.
೭೪೦ ಕೆಲಸಿ ವೊಳ್ಳೆಯವನೇ ಸರಿ, ಹೊಲಸಿನಿಂದ ಕುಂಡ್ರ ಕೂಡದು.
೭೪೧ ಕೆಸರಿಗೆ ಹರಗೋಲು ಬೇಕೇ.
೭೪೨ ಕೇಡುಗಾಲಕ್ಕೆ ನಾಯಿಊ ಮರಿ ಮೊಟ್ಟೇ ಇಕ್ಕಿತು.
೭೪೩ ಕೇಡುಗಾಲಕ್ಕೆ ಬುದ್ಧಿ ಇಲ್ಲ, ಮರಣ ಕಾಲಕ್ಕೆ ಮದ್ದು ಇಲ್ಲ.
೭೪೪ ಕೇಡು ಬರುವ ಕಾಲಕ್ಕೆ ಕೂಡುವದು ದುರ್ಬುದ್ಧಿ.

೨೪೫ ಕೇಳದ ಕಿವಿ ಊರಿಗೆ ಮಾರಿಯ ತಂತು.

೨೪೬ ಕೇಳುವವರಿಗೆ ಬುದ್ಧಿ, ಹೇಳುವವರಿಗೆ ಸುದ್ದಿ.

೨೪೭ ಕೈ ತೋರಿಸಿ ಅವಲಕ್ಷಣ ಅನ್ನಿಸಿ ಕೊಂಡ ಹಾಗೆ.

೨೪೮ ಕೈಲಾಸದವರು ಬಲ್ಲರು, ವೈಕುಂಠದವರು ಬಲ್ಲರು.

೨೪೯ ಕೈಲಿದ್ದ ಕಲ್ಲು ಕೊಡೆ, ಮನೆಗೆ ಬಂದರೆ ಬೆಲ್ಲಾ ಕೊಟ್ಟೆಯಾ.

೨೫೦ ಕೈಲಿದ್ದರೆ ಅರ್ಥ, ಹತ್ತ್ರರ ಇದ್ದರೆ ಹೆಂಡತಿ.

೨೫೧ ಕೊಂಕಣಾ ಸುತ್ತಿ ಮೈಲಾರಕ್ಕೆ ಹೋದ ಹಾಗೆ.

೨೫೨ ಕೊಂಕುಳಲ್ಲಿ ಕುರು ಸಲ್ಲ, ಕೊಂಕಣಿಗರ ನೆರೆ ಸಲ್ಲ.

೨೫೩ ಕೊಂಡ ಹಾಗೆ ಮಾರಿದರೆ ಉಂಡ ಊಟಕ್ಕೆ ಮಾರ್ಗವೇನು.

೨೫೪ ಕೊಂಡೋರಿಗೆ ಕೊಟ್ಟೋರಿಗೆ ಕೋಟಿ ಲಾಭವೆಂದಂತೆ.

೨೫೫ ಕೊಂದ ಪಾಪಾ ತಿಂದು ಪರಿಹಾರ.

೨೫೬ ಕೊಟ್ಟಣಾ ಕುಟ್ಟಿ ಮಿಂಡನ ಸಾಕಿದ ಹಾಗೆ.

೨೫೭ ಕೊಟ್ಟ ದೇವರು ಕೊಂಡು ಹೋದರೆ ಕುಟ್ಟಿ ಕೊಂಡು ಅಳೋದ್ಯಾಕೆ.

೨೫೮ ಕೊಟ್ಟ ಸಾಲ ಕೇಳದೆ ಹೋಯಿತು, ಮಾಡಿದಾರಂಭ ನೋಡದೆ [ಹೋಯಿತು.

೨೫೯ ಕೊಟ್ಟು ಕೆಟ್ಟವನಿಲ್ಲ, ತಿರಿದು ಬದುಕಿದವನಿಲ್ಲ.

೨೬೦ ಕೊಟ್ಟು ಬರುವ ನಿಷ್ಠುರಕ್ಕಿಂತ ಕೊಡದೇ ಬರುವ ಮುನಿಸು ಲೇಸು.

೨೬೧ ಕೊಡಲೀ ಕಾವು ಕುಲಕ್ಕೆ ಮೃತ್ಯು.

೨೬೨ ಕೊಡೋದು ಕೊಡು, ಅಡಿಗೇ ಮನೆಗೆ ಹೋಗುತ್ತೇನೆ.

೨೬೩ ಕೊಡೋದೊಂದು ಕಾಸು, ಕೆಲಸವೆರಡು ತಾಸು.

೨೬೪ ಕೊತ್ತಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ.

೨೬೫ ಕೊತ್ತೀ ಪಾತ್ರ ವೊಲೇ ಮುಂದೆ.

೨೬೬ ಕೊಯ್ದ ಕಾಲು ನಾಯಿ ತಿಂದರೇನು, ನರಿ ತಿಂದರೇನು.

೨೬೭ ಕೊರಳ ಮಟ್ಟಿಗೂ ಹೂಳಿ ಮುಗಿಲ ಮಟ್ಟಿಗೂ ಹಾರು ಅಂದಂತೆ.

೨೬೮ ಕೊಳಚೇ ಮೇಲೆ ಹೆಂಟೇ ಹಾಕಿ ಮೋರೇ ಮೇಲೆ ಸಿಡಿಸಿ ಕೊಂಡ.

೨೬೯ ಕೊಳತ ಕುಂಬಳ ಕಾಯಿಗೆ ಕೆಟ್ಟ ತೆಂಗಿನ ಕಾಯಿ.

೨೭೦ ಕೊಳ್ಳೀ ತೆಗದು ಕೊಂಡು ತಲೇ ತುರಿಸಿ ಕೊಂಡಂತೆ.

೨೭೧ ಕೊಳ್ಳೆಯವರು ಕೊಳ್ಳೆಗತ್ತರು, ಸೂರೆಯವರು ಸೂರೆಗತ್ತರು.

೨೭೨ ಕೋಗಿಲೇ ಸುತ್ತಲೂ ಕಾಗೆಗಳು ಕೂಡಿದ ಹಾಗೆ.

೨೭೩ ಕೋಟಿ ಭಾಗ್ಯವಿದ್ದವನಾದರೂ ಕಡೆಗೆ ಕಾಡಿನಲ್ಲೇ ಇರಿಸುತ್ತಾರೆ.

೨೭೪ ಕೋಟಿ ವರಹಾ ಕೊಟ್ಟರೂ ಕೋಮಟೀ ಸಾಕ್ಷಿ ನಂಬ ಕೂಡದು.

೨೭೫ ಕೋಟೆ ಹೋದ ಮೇಲೆ ಪಹರೇ ಕಾದರು.

೨೭೬ ಕೋಟಿ ದೇವರಿಗೆ ವೋಟೇ ದೀಪ.

೨೭೭ ಕೋಣ ಗದ್ದೇ ಉತ್ತರೆ ವೊಸರೋಗರಾ ಇಕ್ಯೋರೋ.

೨೭೮ ಕೋಣನ ಮುಂದೆ ಕಿನ್ನರಿ ಬಾರಿಸಿದ.

೨೭೯ ಕೋಣ ಬೆಳದರೆ ಆನೆ ಆದೀತೇ.

೨೮೦ ಕೋತಿಗೆ ಭಂಗೀ ಇಕ್ಕಿದಂತೆ.

೨೮೧ ಕೋತೀ ಕೈಯಲ್ಲಿ ಹೂಮಾಲೆ ಕೊಟ್ಟ.

೨೮೨ ಕೋಪ ತಾಪಾ ತಂತು, ತಾಪ ಬ್ರಹ್ಮೇತಿ ತಂತು. [ವದಿಲ್ಲ.

೨೮೩ ಕೋಮಟಿ ಮೋಸ ಹೋಗುವದಿಲ್ಲ, ಮೋಸ ಹೋದರೆ ಹೇಳು

೨೮೪ ಕೋಲು ಮುರಿಯ ಬಾರದು, ಹಾವು ಸಾಯ ಬಾರದು.

೨೮೫ ಕೋವೀ ನೋಡಿ ಹೆದರುವವ ಫಿರಂಗಿಗೆ ಬೆಂಕಿ ಕೊಟ್ಟಾನೇ.

೨೮೬ ಕೋಳಿಗೆ ಕೇಳಿ ಮೆಣಸು ಅರಿಯುತ್ತಾರೋ.

೨೮೭ ಕೋಳಿ ನುಂಗಿದ ಕಲ್ಲಿನ ಹಾಗೆ.

೨೮೮ ಕೋಳಿ ಕಾಲಿಗೆ ಗೆಜ್ಜೇ ಕಟ್ಟಿದರೆ ತಿಪ್ಪೆ ಕೆರೆಯದೆ ಇರುವದೋ.

೨೮೯ ಖಂಡುಗ ಉಣ್ಣೋರ ಮನೆಗೆ ಕಡನ್ಯಾರು ಕೊಟ್ಟಾರು.

೨೯೦ ಖಂಡುಗ ಹಾಲಿಗೆ ವೊಂದೇ ಬೊಟ್ಟು ಹೆಪ್ಪು.

೨೯೧ ಖರ್ಜೂರ ಹಣ್ಣಾಗುವಾಗ್ಯೆ ಕಾಗೇ ಬಾಯಿಗೆ ಹುಣ್ಣು.

೨೯೨ ಗಂಗೆಗೆ ಹೋಗಿ ತೆಂಗಿನ ವೋಟೇ ತಂದ ಹಾಗೆ.

೭೯೩ ಗಂಜಿ ಬಿಸಿಯಾದರೆ ಉಪ್ಪಿನ ಕಾಯಿ ಕಚ್ಚಿದ ಹಾಗೆ.
೭೯೪ ಗಂಜೀಪು ಆಡೋರಿಗೆ ಗಂಜಿಯೂ ಸಿಕ್ಕದು.
೭೯೫ ಗಂಟು ಪರರ ಕೈಲಿ ಕೊಟ್ಟು ಸೊಂಟಾ ಮುರಿಸಿ ಕೊಂಡ.
೭೯೬ ಗಂಡನ ಮದಿವೆಯಾದರೂ ಗಂಜೀ ಬರ ತಪ್ಪದು.
೭೯೭ ಗಂಡನಿಗಿಂತ ಹಿರಿಯಳು ಮಂದೋದರಿ.
೭೯೮ ಗಂಡನಿಗೆ ಅಗಳಿಕೆ ತೋರಿಸ ಬೇಡ, ಮಕ್ಕಳಿಗೆ ತೀನಿ ಕಲಿಸ ಬೇಡ.
೭೯೯ ಗಂಡನಿಗೆ ಹೆಂಡತಿ, ವೊಡೆಯನಿಗೆ ರಾಜ್ಯ.
೮೦೦ ಗಂಡ ಸತ್ತ ಮೇಲೆ ಮುಂಡೆಗೆ ಬುದ್ಧಿ ಬಂತು.
೮೦೧ ಗಂಡಸು ಕೂತು ಕೆಟ್ಟ, ಹೆಂಗಸು ತಿರಿಗಿ ಕೆಟ್ಟಳು.
೮೦೨ ಗಂಡು ಮಕ್ಕಳಿಲ್ಲದ ಮುಂಡೇ ಮನಸ್ಸು ಗುಂಡಿಗಿಂತಾ ಘಟ್ಟಿ.
೮೦೩ ಗಂಧದ ಕೊರಡು ಸಮುಗಾರನಲ್ಲಿ ಬಿದ್ದ ಹಾಗೆ.
೮೦೪ ಗಟ್ಟದ ಉಪ್ಪು, ಬೆಟ್ಟದ ನೆಲ್ಲಿಕಾಯಿ.
೮೦೫ ಗತಿ ಇಲ್ಲದವನಿಗೆ ಮತಿ ಇಲ್ಲ.
೮೦೬ ಗಾಣದೆತ್ತಿಗೆ ಗೆಜ್ಜೆ ಯಾಕೆ, ಗೋಣಿಗೆ ಗವಸಣಿಗೆ ಯಾಕೆ.
೮೦೭ ಗಾಣಿಗನ ಸ್ನೇಹಕ್ಕಿಂತ ಗಂಧದ ಹುಡಿಯುವನ ಗುದ್ದ್ಯಾಟ ಲೇಸು.
೮೦೮ ಗಾಣಿಗಿತ್ತಿ ಐಯೋ ಅಂದರೆ ನೆತ್ತಿ ತಣ್ಣಗಾದೀತೇ.
೮೦೯ ಗಾಳಿಯಿಂದ ಧೂಳು ಹಾರಿದರೆ ಕೋಳೀ ಹೊಟ್ಟೆ ತುಂಬೀತೇ.
೮೧೦ ಗಾಳೀ ಗುದ್ದಿ ಮೈನೋಯಿಸಿ ಕೊಂಡ ಹಾಗೆ.
೮೧೧ ಗಿಡನಾಗಿ ಬೊಗ್ಗದ್ದು ಮರನಾದ ಮೇಲೆ ಬೊಗ್ಗೀತೇ.
೮೧೨ ಗಿಳಿಯ ಸಾಕಿ ಬೆಕ್ಕಿಗೆ ಕೊಟ್ಟ ಹಾಗೆ.
೮೧೩ ಗುಟ್ಟು ಸಾವಿರಾಳ ಪೆಟ್ಟು.
೮೧೪ ಗುತ್ತಿಗೆ ಕೊಟ್ಟು ಹೋಯಿತು, ಸುತ್ತಿಗೆ ಮುಣುಗಿ ಹೋಯಿತು.
೮೧೫ ಗುದ್ದಿದ ಗುದ್ದೂ ಗದ್ದೆಗೆ ಬಿಟ್ಟ ನೀರೂ ಸರಿ.
೮೧೬ ಗುಬ್ಬಿ ಯೆಣ್ಣೋ ಕುಡಿದರೆ ಬೀಸುವ ಕಲ್ಲು ತೋಯಿಸೀತೇ.

೮೧೭ ಗುಬ್ಬೀ ಮೇಲೆ ಬ್ರಹ್ಮಾಸ್ತ್ರವೇ. [ಗಲುವದು.

೮೧೮ ಗುಮ್ಮಗಟ್ಟಿ ಜೋಗಿಗಳಂತೆ ಇರುಳು ಕೂಡುವದು, ಹಗಲು ಅ

೮೧೯ ಗುರು ಕೊಟ್ಟ ಜೋಳಿಗೆ ಯೆಂದು ಗೂಟಕ್ಕೆ ತಗಲಿ ಹಾಕಿದರೆ ಹೊಟ್ಟೆ ತುಂಬೀತೆ.

೮೨೦ ಗುರುವಿಗೆ ಗುಟುಕು ನೀರು, ಶಿಷ್ಯನಿಗೆ ಯೆಣ್ಣೆ ಮಜ್ಜನ.

೮೨೧ ಗುರುವಿಗೆ ಇರುವೆ ಕಚ್ಚುವದೇ.

೮೨೨ ಗುರುವಿನಂತೆ ಶಿಷ್ಯ, ತಂದೆಯಂತೆ ಮಗ.

೮೨೩ ಗೂಳ್ಯಾ ತೆಗಿಯುವಾಗ್ಯೆ ಸಾಳೇ ಅಂಜಿಕೆ ಯೇನು.

೮೨೪ ಗೆಣೆಗೆ ಗೆಣಸು ಬೇಡ, ಹುಣಿಸೆಗೆ ಹುಳಿ ಬೇಡ.

೮೨೫ ಗೆದ್ದರೆ ಕೈಕಾಲು, ಸೋತರೆ ಕಿವಿ ಮೂಗು.

೮೨೬ ಗೆದ್ದರೆ ಹಲ್ಲರು ಗೆದ್ದರು, ಸೋತರೆ ಕೊಂಕಣಿಗರ ಗಂಡು ಸೋತ.

೮೨೭ ಗೇಣುದ್ದ ತಪ್ಪಿದರೆ ಮಾರುದ್ದ ತಪ್ಪುವದು.

೮೨೮ ಗೇಣು ಬಿಟ್ಟು ಅಗಳು ದಾಟಿದ ಹಾಗೆ.

೮೨೯ ಗೊಂಬೆ ಮಾತಾಡದು, ರಂಭೆ ಕಾಣ ಸಿಕ್ಕಳು.

೮೩೦ ಗೊಡ್ಡಿ ಹೆರುವಳೇನು, ಬೊಡ್ಡಿ ಅಳುವಳೇನು.

೮೩೧ ಗೊಡ್ಡು ಸಾರಿಗೆ ಜಡ್ಡು ತುಪ್ಪ.

೮೩೨ ಗೊಲ್ಲರ ಅರಸಾಗಿ ಮಜ್ಜಿಗೆಗೆ ದರಿದ್ರ.

೮೩೩ ಗೋಡೇ ಬಿದ್ದರೆ ಜಗಲೀ ಮೇಲೆ.

೮೩೪ ಗೋಡೇ ಹಾರುವವ ಬೇಲೀ ಹಾರನೇ.

೮೩೫ ಗೋಪಾಳ ಬುಟ್ಟಿಯಲ್ಲಿ ಶನೀಶ್ವರ ಹೊಕ್ಕ ಹಾಗೆ.

೮೩೬ ಗೋಮುಖದ ವ್ಯಾಘ್ರ.

೮೩೭ ಗೋಳೀ ಬೇರು ದಾಟಿದ ಮೇಲೆ ಗೋಪಾಳರಾಯ.

೮೩೮ ಗೌಜಿ ಯೇನೂ ಇಲ್ಲ, ಗೋವಿಂದ ಭಟ್ಟ ಭಾವೀಲಿ ಬಿದ್ದ.

೮೩೯ ಗೌಡನ ಹೆಂಡತಿ ಕಡುಚೆಲ್ವೆಯಾದರೆ ಕಸದ ಮಂಕ್ರಿ ಹೊತ್ತು ತಂದಾಗ ಕಂಡೀತು.

೪೪೦ ಗೌಡೀ ಹಾಡಿಗೆ ತೌಡೇ ತ್ಯಾಗ.

೪೪೧ ಗ್ರಾಮಶಾಂತಿಗೆ ತಳವಾರ ತಲೇ ಬೋಳಿಸಿ ಕೊಂಡ.

೪೪೨ ಘಂಟೆಗೆ ವೊಂದೇ ಸ್ವರ.

೪೪೩ ಘೂಳಿಗೆ ಬಿದ್ದ ಅನ್ನ ಪಿಂಡಕ್ಕೆ ಬಾರದು.

೪೪೪ ಘೂಳಿ ಬಂದಾಗ್ಯೆ ತೂರಿ ಕೊಳ್ಳ ಬೇಕು.

೪೪೫ ಚಂಬು ಚರಿಗೆಗೆ ದರಿದ್ರವಾದರೂ ಹಂಚು ಹುಡಿಗೆ ದರಿದ್ರವಿಲ್ಲ.

೪೪೬ ಚಕ್ಕಂದದವನಿಗೆ ತಕ್ಕ ಫಲ ಸಿಕ್ಕುವದು.

೪೪೭ ಚನ್ನಾಗಿದ್ದರೆ ನಂಟರು, ಕೆಟ್ಟರೆ ಸ್ನೇಹಿತರು.

೪೪೮ ಚಪ್ಪರಕ್ಕೆ ಗತಿ ಇಲ್ಲದವ ಉಪ್ಪರಿಗೇ ಅಪೇಕ್ಷಿಸಿದ. [ತೂರಿದ.

೪೪೯ ಚಾಪೇ ಕೆಳಗೆ ವೊಬ್ಬ ತೂರಿದರೆ ಇನ್ನೊಬ್ಬ ರಂಗೋಲಿ ಕೆಳಗೆ

೪೫೦ ಚಿಂತೆಯೇ ಮುಪ್ಪು, ಸಂತೋಷವೇ ಯೌವನ.

೪೫೧ ಚಿಕ್ಕಪ್ಪ ತಾನೂ ಇಕ್ಕ, ಭಿಕ್ಷೆಯನ್ನು ಬೇಡಲೀಸ.

೪೫೨ ಚಿಕ್ಕಪ್ಪನಾದರೆ ಮನೆಗೆ ಬಂದು ಕಾಲು ಹಿಡಿದೇನು, ಅಪರಾಧಕ್ಕೆ ಧೋತ್ರಾ ಕೊಡ ಬೇಕು.

೪೫೩ ಚಿಕ್ಕ ಮೀನು ಬಂದು ದೊಡ್ಡ ಮೀನ ನುಂಗಿತಂತೆ.

೪೫೪ ಚಿಕ್ಕ ಮೆಣಸಿಗೆ ಖಾರ ಹೆಚ್ಚು.

೪೫೫ ಚಿನ್ನಕ್ಕೂ ಕಬ್ಬಿಣಕ್ಕೂ ಹೆಚ್ಚು ಕಡಿಮೆ ಇಲ್ಲವೇ.

೪೫೬ ಚಿನ್ನದ ಚೂರಿ ಯೆಂದು ಕುತ್ತಿಗೆ ಕುಯಿಸಿ ಕೊಳ್ಳ ಬಹುದೇ.

೪೫೭ ಚಿನ್ನದ ತಲೆಯಾದರೂ ವೊಡೀಲಿಕ್ಕೆ ಕಬ್ಬಿಣವೇ.

೪೫೮ ಚಿನ್ನದ ಹರಿವಾನವಾದರೂ ಮಣ್ಣಿನ ಗೋಡೆಗೆ ವೊರಗ ಬೇಕು.

೪೫೯ ಚಿನ್ನಿವಾರನ ಮನೇ ನಾಯಿಯಾದರೆ ನಾಣ್ಯದ ನೋಟಾ ಬಲ್ಲದೇ.

೪೬೦ ಚೇಳಿಗೆ ಪಾರುಪತ್ಯಾ ಕೊಟ್ಟರೆ ಜಾವಕ್ಕೊಂದು ಸರ್ತಿ ಮುಟ್ಟಿಸಿತು.

೪೬೧ ಚೇಳಿಗೆ ಮುತ್ತು ಕೊಟ್ಟ ಹಾಗೆ.

೪೬೨ ಚೇಳಿನ ಮಂತ್ರವನ್ನರಿಯದವ ಹಾವಿನಹುತ್ತಕ್ಕೆ ಕೈ ಹಾಕಿದ ಹಾಗೆ.

೮೬೩ ಚೈತ್ರದಲ್ಲಿ ಮೈತ್ರನಾದರೂ ಮೈತಗಲಿಸ ಕೂಡದು.

೮೬೪ ಚೋಟುದ್ದ ಮಗುವಿಗೆ ಗೇಣುದ್ದ ಕುಲಾವಿಯೇ.

೮೬೫ ಚೋಳ ದೇಶದವ ಚೇಳಿಗಿಂತ ಹೆಚ್ಚು.

೮೬೬ ಚೌಲೋಪನಯನವಾಗದವ ನವಿಲಿಗಿಂತ ಕಡೆ

೮೬೭ ಛಂದವಿದ್ದಲ್ಲಿ ಮಂದತ್ವವಿರ ಬಾರದು.

೮೬೮ ಛಲವಾದಿಯ ಸಂಗಡ ಹಟವಾದಿ ಸೇರಿದ ಹಾಗೆ. [ಬಿದ್ದರೇನು.

೮೬೯ ಛಳಿಗಿಲ್ಲದ ಕಂಬಳಿ ಮಳೇ ಮೇಲೆ ಬಿದ್ದರೇನು, ಮುಳ್ಳಿನ ಮೇಲೆ

೮೭೦ ಛಳೀ ಕಾಲಕ್ಕಿಂತ ಮಳೆಗಾಲ ವಾಸಿ.

೮೭೧ ಛಿಂದಿಯಾದರೂ ದೊಂದಿಗೆ ಆಗುತ್ತದೆ.

೮೭೨ ಛೀ ಅಂದರೆ ತನ್ನ ಭಲಾ ಯೆಂದರು ಅಂದ ಹಾಗೆ.

೮೭೩ ಜಂಗಮಗೆ ಕುಲವಿಲ್ಲ, ಲಿಂಗಕ್ಕೆ ಹೊಲೆ ಇಲ್ಲ.

೮೭೪ ಜಂಗಮನ ಹೆಂಡತಿ ಜಾಣೆಯಾದರೆ ಜಗಕ್ಕೆ ಬಂದ ಭಾಗ್ಯವೇನು.

೮೭೫ ಜಂಜಾಟ ತಪ್ಪಿದರೆ ಆತನಡ್ಡಿ ಯೇನು. [ಹಾಗೆ.

೮೭೬ ಜಂಪಾಶೆಟ್ಟಿ ಝಾಡಿ ತಾರೋ ಅಂದರೆ ಜಲಪ್ರಮಾಣವೆಷ್ಟು ಅಂದ

೮೭೭ ಜಂಬರದವನಿಗೆ ತಂಬೂರವೋ.

೮೭೮ ಜಗಧೀಶ್ವರನ ದಯೆ ಇದ್ದರೆ ಜಗತ್ತೆಲ್ಲಾ ನನ್ನದು.

೮೭೯ ಜಗಲೀ ಹಾರದವ ಗಗನಾ ಹಾರ್‍ಯಾನೇ. [ತ್ತದೆ.

೮೮೦ ಜಗಳವಿಲ್ಲದೆ ಜಾಹೊತ್ತಿದ್ದರೆ ಜಿಗಳೆ ಬಂದು ಕಚ್ಚಿದ ಹಾಗೆ ಆಗು

೮೮೧ ಜಗಳವಿಲ್ಲವೇ ಜಂಗಮಯ್ಯಾ ಅಂದರೆ ಹರಕು ಮುಂಡೆ ಭಿಕ್ಷಾನೀ

೮೮೨ ಜಗಾ ಜಾಲಿಸುವ ಬಡ್ಡಿ ಮಗೂ ತೂಗಲಾರಳೋ. [ಡೆ ಅಂದ.

೮೮೩ ಜಗಾ ಹೊರುವವಳಿಗೆ ಮಗು ಭಾರವೇ.

೮೮೪ ಜಟ್ಟಿಯಾದರೂ ಥಟ್ಟನೆ ಹಾರ ಬೇಕು.

೮೮೫ ಜಡದವ ನಡದು ಬಂದಾನೇ.

೮೮೬ ಜತನವಿದ್ದವಗೆ ಮಥನವಿಲ್ಲ.

೮೮೭ ಜನನಕ್ಕಿಂತ ಮರಣ ಹೆಚ್ಚು.
೮೮೮ ಜನ ಮರುಳೋ ಜಾತ್ರೆ ಮರುಳೋ.
೮೮೯ ಜರ ಬಂದು ಬರ ಮರತು ಹೋಯಿತು.
೮೯೦ ಜರೆ ಬಂದರೂ ನರೆ ಬರ ಬಾರದು.
೮೯೧ ಜಳ್ಳು ಮಾತಿನಿಂದ ಹೊಳ್ಳು ಗಳೆಯುತ್ತಾನೆ.
೮೯೨ ಜಾಗವಿದ್ದಲ್ಲಿ ತಾಗ ಬೇಕು.
೮೯೩ ಜಾಡಗಿತ್ತಿಯ ಗಂಡನಾದರೂ ನೆಯ್ದಲ್ಲದೇ ಬಟ್ಟೆಯಾಗದು.
೮೯೪ ಜಾಡನಾದರೂ ನೋಡಿ ನೇಯ ಬೇಕು.
೮೯೫ ಜಾಣನಿಗೆ ಊನಯವಿರ ಬಾರದು.
೮೯೬ ಜಾಣೆಯಾದರೆ ವೀಣೆ ಬಾರಿಸ್ಯಾಳು.
೮೯೭ ಜಾತಕರ್ಮ ಮಾಡಿದವನಿಗೆ ಪಾತಕವಿಲ್ಲವೋ.
೮೯೮ ಜಾತಿಗೆ ತಕ್ಕ ನೀತಿ.
೮೯೯ ಜಾತಿಗೆ ತಕ್ಕ ಮಾತು, ತೂತಿಗೆ ತಕ್ಕ ಬೆಣೆ.
೯೦೦ ಜಾತಿ ತಪ್ಪಿದರೂ ನೀತಿ ತಪ್ಪ ಬಾರದು.
೯೦೧ ಜಾತಿ ಬೇರೆಯಾದರೆ ನೀತಿ ಬೇರೆಯೇ.
೯೦೨ ಜಾತಿ ಸ್ವಲ್ಪವಾದರೂ ಪಾತಕಕ್ಕೆ ಕಡಿಮೆ ಇಲ್ಲ.
೯೦೩ ಜಾರ ಚೋರರ ಜಗಳದಿಂದ ಯಜಮಾನಗೆ ಕ್ಷೇಮ.
೯೦೪ ಜಾರೆಗೆ ನೀತಿ ಇಲ್ಲ, ಮಾರಿಗೆ ಕರುಣವಿಲ್ಲ.
೯೦೫ ಜಾರೇ ಗುಣ ಪೋರೆಯಿಂದ ಕಾಣುವದು.
೯೦೬ ಜಾಲೀ ಬಿತ್ತಲು ಕಾಲಿಗೆ ಮೂಲ.
೯೦೭ ಜಿಗಣೇ ಉಪದ್ರಾ ನೋಡಲೋ, ಜಟಿಯ ಹಾವಳೀ ನೋಡಲೋ.
೯೦೮ ಜಿಡ್ಡು ತುಪ್ಪಕ್ಕೆ ಮಡ್ಡು ಬಹಳ.
೯೦೯ ಜಿನ್ನೇ ದೇವರ ಮನೆಗೆ ಭೈರವ ದೇವರು ಬಂದ ಹಾಗೆ.
೯೧೦ ಜೀತಗಾರಗೆ ಯಾತಕ್ಕೆ ಜೀರಿಗೆ ಬೆಲ್ಲ.

೯೧೧ ಜೀನಗಾರಗೆ ಶಿಕಲಿಗಾರ ಸಾಕ್ಷಿ.

೯೧೨ ಜೀನನ ಮನಸ್ಸು ಯಾವಾಗ್ಯೂ ಹೀನವೇ ಸರಿ.

೯೧೩ ಜೀನಸು ಇದ್ದರೂ ಮನಸ್ಸು ಇಲ್ಲ.

೯೧೪ ಜೀವಕ್ಕೆ ಸಂಚಕಾರ ಶೀರೆಯು ಸೆರಗು.

೯೧೫ ಜುಟ್ಟು ಇದ್ದರೆ ಮಟ್ಟು ತಿಳದೀತು.

೯೧೬ ಜುಟ್ಟು ಇದ್ದವ ನೆಟ್ಟಗೆ ಸಿಕ್ಕ್ಯಾನು.

೯೧೭ ಜುಣುಗುವವನ ಸಂಗಡ ಹೋಗ ಬಾರದು.

೯೧೮ ಜುಮ್ಮುಗಾರಗೆ ಹಮ್ಮು ಹೆಚ್ಚು.

೯೧೯ ಜೂಜಾಡುವವಗೆ ಸತ್ಯವ್ಯಾಕೆ.

೯೨೦ ಜೂಜಾಡುವವನಿಗೆ ಜಂಗಮನ ಸುದ್ದಿ ಯಾಕೆ.

೯೨೧ ಜೆರಿಗೆ ಹಾರಿದರೆ ನರಿ ಸಹ ಮುಟ್ಟದು.

೯೨೨ ಜೇಡಿ ಮಣ್ಣು ಜಡಿದರೆ ಸಕ್ಕರೆ ಆಗುವದೋ.

೯೨೩ ಜೇನು ಬೇಕೆಂತ ಮೇಣ ಸಹಾ ತಿಂದ ಹಾಗೆ.

೯೨೪ ಜೇನು ಹುಳ ಕಚ್ಚುವಾಗ್ಯೆ ಮಾನಿ ಅಂದರೆ ಬಿಟ್ಟೀತೇ.

೯೨೫ ಜೇಷ್ಠೋ ಮೂಲ ಮಾವ ಮಾಡಿದ್ದೇ.

೯೨೬ ಜೊತೆಗಾರನ ಸಂಗಡ ಮಥನಿಸ ಬಾರದು.

೯೨೭ ಜೊತೆಗಾರನ ಹೋಗಿ ವ್ಯಥೆ ಆರಂಭಿಸಿತು.

೯೨೮ ಜೊತೆ ಬಿಟ್ಟರೂ ವ್ಯಥೆ ಬಿಡಲಿಲ್ಲ.

೯೨೯ ಜೋಗಿಗೆ ಜೋಗಿ ತಬ್ಬಿ ಕೊಂಡರೆ ಮೈಯೆಲ್ಲಾ ಬೂದಿ.

೯೩೦ ಜೋಗಿ ಜೋಗಿ ತಟ್ಟ್ಯಾಡಿದರೆ ಬುರಡೆ ಬುರಡೆ ತಟ್ಟ್ಯಾಡಿತು.

೯೩೧ ಜೋಗಿ ಯೆದ್ದರೆ ಕಡಾಸು ಹೆಗಲ ಮೇಲೆ.

೯೩೨ ಜೋಗುಳದಿಂದ ತೊಟ್ಲು ಆಡುವದೋ.

೯೩೩ ಜೋಜೋ ಅಂದರೆ ಜ್ಞಾನವಂತೆಯೇ.

೯೩೪ ಜೋಡು ಇದ್ದರೆ ನಾಡು ತಿರುಗ ಬಹುದು.

೧೩೫ ಜೋಡು ಬಿಟ್ಟು ಹೋಯಿತು, ಹಾಡು ಮುಗಿದು ಹೋಯಿತು.

೧೩೬ ಜೋತಿ ಇದ್ದಲ್ಲಿ ಭೀತಿ ಇಲ್ಲ.

೧೩೭ ಜೋಲುವವನ ಕಾಲು ಹಿಡಿದರೆ ಸಾಲ ತೀರೀತೇ.

೧೩೮ ಜೋಳ ಹೊಸದಾದರೆ ಮುತ್ತು ಆದೀತೇ.

೧೩೯ ಜೋಳಾ ತಿಂದ ಕ್ಷಣ ಜೋಳ ಕಾಣುವದೋ.

೧೪೦ ಜ್ಞಾನವಂತಗೆ ಸ್ನಾನ ಯಾಕೆ.

೧೪೧ ಜ್ಞಾನಿ ಬಂದರೆ ಮನ್ನಿಸು, ಹೀನ ಬಂದರೆ ತ್ಯಜಿಸು.

೧೪೨ ಜ್ಞಾಪಕವಿದ್ದವನು ಭಾಪು ಯೆನ್ನಿಸುವನು.

೧೪೩ ಝುಗಳಗಾತಿ ಮಗಳನ್ನರಿಯಳು.

೧೪೪ ಟೆಕ್ಕು ಇರುವವನಿಗೆ ಟಿಕಾಣಿ ಸಿಕ್ಕದು.

೧೪೫ ಟಿಂಟೀ ಬೋಳ, ಮದನ ಗೋಪಾಳ.

೧೪೬ ಟೊಂಕ ಮುರಿದರೂ ಬಿಂಕ ಮುರೀಲಿಲ್ಲ.

೧೪೭ ಟೊಣ್ಣೆಯೊದರೆ ಮಣ್ಣು ಕೆಲಸಾ ಮಾಡ್ಯಾಳು.

೧೪೮ ಟೊಳ್ಳು ಮಾತು ಸುಳ್ಳಿಗಿಂತ ಕಡೆ.

೧೪೯ ಠವಣೆ ಯೆಂಬುವದು ಕವಣೇ ಕಲ್ಲೋ.

೧೫೦ ಠಾಣೆಗಾರಗೆ ನಾಣ್ಯಾ ಕೊಟ್ಟವನೇ ಜಾಣ.

೧೫೧ ಠಾವು ಇಲ್ಲದವ ಹಾವಿಗಿಂತ ಕಡೆ.

೧೫೨ ಠಿಕಾಣಿ ಇದ್ದವನು ಠವರನು.

೧೫೩ ಠಿಕಾಣಿ ಇಲ್ಲದವ ಮುಖಾ ಮುಚ್ಚಿ ಹೋದ.

೧೫೪ ಠೀವಿಯಿಂದ ನೋವು ಮುಚ್ಚಿ ಕೊಂಡ.

೧೫೫ ಠೌಳಿಗಾರನ ಮೈಮೇಲೆ ಗೌಳಿ ಬಿತ್ತು.

೧೫೬ ಠೌಳಿಗಾರನ ಹತ್ತರ ಧರ್ಮ ಉಂಟೋ.

೧೫೭ ಡಂಗುರಾ ಹೊಡದರೆ ಹೊಂಗರಕನ ಮರ ಕೇಳೀತೋ.

೧೫೮ ಡಮಾರದ ಶಬ್ದಕ್ಕೆ ಕೈಕಾಲು ಬಿಟ್ಟ.

೯೫೯ ಡೊಂಕಾದರೆ ಸುಂಕಾ ಬಿಟ್ಟಾನೇ.
೯೬೦ ಡೋಣೀ ದಾಟಿದ ಮೇಲೆ ಅಂಬಿಗಾರನ ಮಿಂಡ.
೯೬೧ ತಂಗಿ ಬಡವಳಾದರೆ ತಂಗಳ ಹಿಟ್ಟಿಗೂ ಗತಿ ಇಲ್ಲವೇ.
೯೬೨ ತಂಘಾಳಿ ಕಂಡರೆ ಮಂಗವಾದರೂ ಉಲ್ಲಾಸಿಸುತ್ತದೆ.
೯೬೩ ತಂಟೆ ತೀರಿದರೂ ತಕರಾರು ಹೋಗಲಿಲ್ಲ.
೯೬೪ ತಂಟೇಯವನ ನಂಟಿಕೆ ಸಲ್ಲ, ವೊಂಟಿಯಾಗಿ ಹೋಗ ಸಲ್ಲ. [ಕಡೆ.
೯೬೫ ತಂಡದ ಜನರು ಹಿಂಡು ವೊಡ ಕೊಂಡು ಹೋದರೆ ಮುಂಡೇರಿಂದ
೯೬೬ ತಂಡಾ ಮುಂಡಾ ವಾಸುದೇವ.
೯೬೭ ತಂಡುಲಂ ಪ್ರಸ್ತಮೂಲಂ.
೯೬೮ ತಂತರವಿದ್ದವನಿಗೆ ಮಂತರ ಬೇಡ.
೯೬೯ ತಂತುಗಾರಗೆ ಯೂಕೆ ತಂತೀ ಆಟ.
೯೭೦ ತಂತ್ರಗಾರನನ್ನು ಕುತಂತ್ರಗಾರ ಜೈಸಿದ. [ಬೇಡ.
೯೭೧ ತಂತ್ರವನರಿಯೆನು, ಮಂತ್ರವನರಿಯೆನು, ಯಂತ್ರವನರಿಯೆಂದೆನ
೯೭೨ ತಂತೀವಾದ್ಯವನ್ನು ತಕ್ಕೈಸಿ ಕೇಳಿದ ಹಾಗೆ.
೯೭೩ ತಂದ ಹೊರೆ ಬರಿದೇ ಹೋಯಿತು.
೯೭೪ ತಂದೆಗೆ ವೊಳ್ಳೆಯವ ಯೆಂತ ಹೇಳಿಸಿದ ಅಂಬಿಗನ ಮಗ.
೯೭೫ ತಂದೆಯು ಹೋಲೋ ಕಂದಯ್ಯ.
೯೭೬ ತಂದೇ ಮದಿವೆಗೆ ಪಂಜು ಹಿಡಿಯುವ ಮಗ.
೯೭೭ ತಂಪು ಇದ್ದವನಿಗೆ ಸಂಪು ಇದ್ಧೀತು.
೯೭೮ ತಂಬಟೆ ಹೋಗಿ ಭೇರಿಗೆ ದೂರು ಹೇಳಿದ ಹಾಗೆ.
೯೭೯ ತಂಬು ವೊಳ್ಳೇದೇ ಸರಿ ನೆರಳಿಗೆ ಮಾತ್ರಾ ಹಂಬಲಿಸ ಬೇಕು.
೯೮೦ ತಕ್ಕಡಿ ಬಲ್ಲದೇ ಮನೆಯ ಬಡತನವ.
೯೮೧ ತಕ್ಕಡೀ ಸ್ವರೂಪಾ ತಕ್ಕವನೇ ಬಲ್ಲ. [ಕೊಡುವನು.
೯೮೨ ತಕ್ಕ ಮಾತಿಗೆ ವೊಕ್ಕಲಿಗರು ವೊಡಂಬಡದಿದ್ದರೆ ರೊಕ್ಕಾ ಹ್ಯಾಗೆ

೯೮೩ ತಕ್ಕವನಲ್ಲಿ ಹೊಕ್ಕಿದ್ದರೆ ತಕ್ಕಷ್ಟು ಆದರೂ ಸಿಕ್ಕುವದು.

೯೮೪ ತಕ್ರ ಶಕ್ರನಿಗೆ ಸಹಾ ದುರ್ಲಭ.

೯೮೫ ತಗಣೇ ಉಪದ್ರ ಮಗಳಿಗೂ ಬಿಡಲಿಲ್ಲ.

೯೮೬ ತಗಲಿದವನಿಗೆ ಹಗಲಿರುಳೇನು.

೯೮೭ ತಗ್ಗಿದವ ಯೆಂದಿಗೂ ನುಗ್ಗಾಗ.

೯೮೮ ತಗ್ಗು ಗದ್ದೆಗೆ ಮೂರು ಬೆಳೆ, ಯೆತ್ತರ ಗದ್ದೆಗೆ ವೊಂದೇ ಬೆಳೆ.

೯೮೯ ತಗ್ಗು ದವಸಕ್ಕಾಗಿ ಹಗ್ಗಾ ಕೊಂಡ ಹಾಗೆ.

೯೯೦ ತಟಕಿನಿಂದ ತಟಪಟವಾಯಿತು.

೯೯೧ ತಟಕು ಬಿದ್ದು ಮಠಾ ಕೆಡಿಸಿತು.

೯೯೨ ತಟಸ್ಥನಾದವನಿಗೆ ತಂಟೆ ಯೇನು.

೯೯೩ ತಟ್ಟನೆ ಆಡಿದರೆ ಕೊಟ್ಟಷ್ಟು ಫಲ.

೯೯೪ ತಟ್ಟನೆ ಬಾ ಯೆಂದರೆ ತುಟೀ ಬಿಟ್ಟನಂತೆ.

೯೯೫ ತಟ್ಟಿನಲ್ಲಿ ಬಿದ್ದಾಗ ಘಟ್ಟಿ ಆಗಲಾರ.

೯೯೬ ತಟ್ಟು ಇದ್ದರೆ ತಟಾಯಿಸಿ ನಡದಾನು.

೯೯೭ ತಡವ ಮಾಡುವವನ ಗೊಡವೆ ಬೇಡ.

೯೯೮ ತಡವಿದರೆ ಮಡಿ ಸಹಾ ಕೆಡುವುದು.

೯೯೯ ತಡೇ ಕಟ್ಟುವವನ ಮುಂದೆ ಮುಡಿ ಯೇನು.

೧೦೦೦ ತಣ್ಣಗಿದ್ದರೆ ಮಣ್ಣಾದರೂ ಅಸಾಧ್ಯ.

೧೦೦೧ ತಣ್ಣೀರು ಆದರೂ ಪುಣ್ಯದಿಂದ ದೊರಕ ಬೇಕು.

೧೦೦೨ ತತ್ರಬಿತ್ರಿಯವನ ಮುಂದೆ ಕತ್ತೆಯ ಹಾಗೆ ಆದ.

೧೦೦೩ ತನಗೆ ಇಲ್ಲದ ಮಾರಿ ತಮ್ಮಡಿಗೆ ವರಾ ಕೊಟ್ಟೀತೇ.

೧೦೦೪ ತನಗೆ ಬಂದ ಹಾನಿ ಅರ್ಥದಿಂದ ಹೋಯಿತು.

೧೦೦೫ ತನಗೇ ಇಲ್ಲದವನು ಪರನಿಗೇನು ಕೊಟ್ಟಾನು.

೧೦೦೬ ತನಗೇ ಇಲ್ಲದವಳು ಮಕ್ಕಳಿಗೇನು ಹೊದಿಸ್ಯಾಳು.

೧೦೦೭ ತನ್ನ ಕಾಲಿಗೆ ತಾನೇ ಶರಣು ಮಾಡಿ ಹರಸಿ ಕೊಂಡ ಹಾಗೆ.
೧೦೦೮ ತನ್ನಕ್ಕನ ಅರಿಯದವಳು ನೆರಮನೆ ಬೊಮ್ಮಕ್ಕನ ಬಲ್ಲಳೇ.
೧೦೦೯ ತನ್ನ ತಾನರಿದರೆ ಸುಜ್ಞಾನಿ. [ಳಿದ.
೧೦೧೦ ತನ್ನದಂತಾ ತಾನು ಮುರ ಕೊಂಡು ಅನ್ಯನ ಮೇಲೆ ದೂರು ಹೇ
೧೦೧೧ ತನ್ನ ಮುಂದೆ ಉಪ್ಪು ಇಲ್ಲ, ಬೆನ್ನು ಹಿಂದೆ ಉರಿಯೊ.
೧೦೧೨ ತನ್ನ ಸುಖವೇ ಲೋಕದ ಸುಖ, ತನ್ನಕಷ್ಟವೇ ಲೋಕದ ಕಷ್ಟ.
೧೦೧೩ ತನ್ನ ಹೊಟ್ಟೇ ತಾನು ಹೊರೆಯದವ ಮುನ್ನಾರ ಸಲಹುವನು.
೧೦೧೪ ತಪಸ್ಸಿಗೆಂತ ಹೋಗಿ ಕುಪ್ಪಸಾ ಕಳಕೊಂಡ.
೧೦೧೫ ತಪಸ್ಸು ಇದ್ದವನೇ ಗಭಸ್ತಿ ಉಳ್ಳವನು.
೧೦೧೬ ತಪ್ಪನೆ ಬಾ ಅಂದರೆ ತಬ್ಬಲಿಕ್ಕೆ ಬಂದ ಹಾಗೆ.
೧೦೧೭ ತಪ್ಪಲೇಲಿದ್ದದ್ದು ಹೋದರೆ ಕಪಾಲದಲ್ಲಿದ್ದದ್ದು ಹೋದೀತೋ.
೧೦೧೮ ತಪ್ಪಿದವನಿಗೆ ವೊಪ್ಪು ಇಲ್ಲ.
೧೦೧೯ ತಪ್ಪಿ ಬಿದ್ದವನಿಗೆ ತೆಪ್ಪ ಯೇನು ಮಾಡೀತು.
೧೦೨೦ ತಪ್ಪು ಹೊರಿಸಿದವನಿಗೆ ವೊಪ್ಪುವವನ್ಯಾರು.
೧೦೨೧ ತಫಾವತುಗಾರ ತಪ್ಪಿದರೆ ತಿಪ್ಪಯ್ಯಗೇನು ಕೋಪ.
೧೦೨೨ ತಬ್ಬಲಿ ತಬಕು ಕದ್ದು ಜಗಲೀಲಿ ಸಿಕ್ಕಿ ಬಿದ್ದ.
೧೦೨೩ ತಮ್ಮ ವೊಳ್ಳೆಯವನೇ ಸರಿ, ವೊಮ್ಮಾನಕ್ಕೆಗೆ ಮಾರ್ಗವಿಲ್ಲ.
೧೦೨೪ ತಮ್ಮ ಕಲಹಕೆ ತಾವು ಐವರು, ಪರರ ಕಲಹಕೆ ನೂರ ಐವರು.
೧೦೨೫ ತಮ್ಮ ನಮ್ಮವನಾದರೂ ನಾದಿನಿ ನಮ್ಮವಳಲ್ಲ.
೧೦೨೬ ತಮ್ಮನ ಸಂಗಡ ತಂಗೀ ಗಂಡ ದೂರು ಹೇಳಿದರೆ ನಿನಗೇನಪ್ಪ.
೧೦೨೭ ತಮ್ಮನ ಸಂಗಡ ತಿಮ್ಮ ಬಂದರೆ ತಂಗಳನ್ನವೇ ಗತಿ.
೧೦೨೮ ತರಗು ತಿಂಬುವದೇ ಪರಮ ಸುಖ.
೧೦೨೯ ತರಗು ತಿಂಬುವನಿಗೆ ವೊರಗೊಂದು ಕೇಡು.
೧೦೩೦ ತರಗು ಮೊರದಲ್ಲಿ ಹಿಡಿಯದು.

೧೦೩೧ ತರಗು ಅಡ್ಡಿಗೆಗೆ ಡೊಳ್ಳು ಗಣಪತಿಯೇ ಶ್ರೇಷ್ಟ.
೧೦೩೨ ತರಗೆಲೆಯಡಿಕೇ ತಿರಿದು ತಿನ್ನ ಬೇಕೇ.
೧೦೩೩ ತರತರವಾಗಿ ಹೇಳಿದ್ದು ಮರತರೆ ಮರಕ್ಕಿಂತ ಕಡೆ.
೧೦೩೪ ತರಲಿಲ್ಲ ಬರಲಿಲ್ಲ, ಬರ ಹ್ಯಾಗೆ ಹಿಂಗೀತು.
೧೦೩೫ ತರಹರಿಸಲಾರದವಳು ಮರಣಕ್ಕೆ ಪಾತ್ರಳು.
೧೦೩೬ ತರುಬಿದವಗೂ ಓಡಿದವಗೂ ಸರಿಪಾಲು ಕಷ್ಟ.
೧೦೩೭ ತರುಬಿಲ್ಲದ ವೊಡ್ಡನು, ಬಿರಿಸಿಲ್ಲದ ಹುರಿಯು.
೧೦೩೮ ತರುಬಿ ಹೋಗುವನ್ನ ಕರುಬಿ ಮಾಡುವದೇನು.
೧೦೩೯ ತರುಬು ಇದ್ದರೆ ಹರುಬು ನಿಂತೀತೇ.
೧೦೪೦ ತರುವವ ಮರತರೆ ವೊರಾರ ಯೇನು ಮಾಡೀತು.
೧೦೪೧ ತರುವವ ಹೋದ ಮೇಲೆ ಮರುಗುವವರುಂಟೇ.
೧೦೪೨ ತರ್ಕ ಮಾಡುವವ ಮೂರ್ಖನಿಂದ ಕಡೆ,
೧೦೪೩ ತರ್ಲೆ ಕೇಳುವವ ಮರುಳುಕ್ಕಿಂತ ಕಡೆ.
೧೦೪೪ ತಲೆಗೆ ಯೆಣ್ಣೆ ಇಲ್ಲ, ತನುಮೃಗನಾಭಿ ಬೇಡಿತು.
೧೦೪೫ ತಲೆ ಘಟ್ಟಿ ಯೆಂದು ಕಲ್ಲು ಹಾಯ ಬಾರದು.
೧೦೪೬ ತಲೆ ಚನ್ನಾಗಿದ್ದರೆ ಮುಂಡಾಸು ಸಹಸ್ರ ಕಟ್ಟ ಬಹುದು.
೧೦೪೭ ತಲೆ ಕಾಗಿದ್ದಲ್ಲದೆ ಬುದ್ಧಿ ಬಾರದು.
೧೦೪೮ ತಲೇ ವೊಡದವನೂ ಸಮ, ಲೇಪಾ ಹಚ್ಚಿದವನೂ ಸಮ. [ಬಹುದು.
೧೦೪೯ ತಲೇ ಕೂದಲಿದ್ದರೆ ಯತ್ತ ಬೇಕಾದರೂ ತುರುಬು ಹಾಕಿ ಕೊಳ್ಳ
೧೦೫೦ ತಲೇ ಕೂದಲಿಲ್ಲದವಳು ತುರುಬು ಬಯಸಿದಳಂತೆ.
೧೦೫೧ ತಲೇ ಕೂದಲು ಉದ್ದವಿದ್ದವಳು ಹ್ಯಾಗೆ ಕಟ್ಟಿದರೂ ಚಂದ.
೧೦೫೨ ತಲೇ ಕೂದಲು ನೆರೆಯಾದ ಮೇಲೆ ತಬ್ಬಿ ಕೊಂಡ ತಬ್ಬಲಿ ಮುರಪ.
೧೦೫೩ ತಲೇ ಮೂರು ಸುತ್ತು ತಿರುಗಿದರೂ ತುತ್ತು ಬಾಯಿಲಿ.
೧೦೫೪ ತಲೇ ಮೇಲಣ ಬರಹ ಯೆಲೆಯಿಂದ ಒರಸಿದರೆ ಹೋದೀತೇ.

೧೦೫೫ ತಲೇ ಶಿಡತಕ್ಕೆ ಮಲಶೋಧನೇ ಕೊಂಡ ಹಾಗೆ.
೧೦೫೬ ತವಕ ಪಟ್ಟವ ತಬ್ಬರಿಸಿ ಬಿದ್ದ.
೧೦೫೭ ತವಡು ತಿಂಬುವವನಿಗೆ ವೈಯಾರವ್ಯಾಕೆ.
೧೦೫೮ ತವಡು ತಿಂಬುವವ ಹೋದರೆ ಉಮ್ಮಿ ತಿಂಬುವವ ಬರುತ್ತಾನೆ.
೧೦೫೯ ತಳವಾರನಿಗೆ ಪಟ್ಟಾ ಕಟ್ಟಿದರೆ ಕುಳವಾರು ಹೋದೀತೋ.
೧೦೬೦ ತಳಾ ಬಿಟ್ಟು ಬಂಡಿ ಹಾರದು. [ಹಾಗೆ.
೧೦೬೧ ತಳಿಗೆ ಚಂಬು ಹೋದ ಮೇಲೆ ಮಳಿಗೇ ಬಾಗಲು ಮುಚ್ಚಿದ
೧೦೬೨ ತಾಯಿ ಇದ್ದರೆ ತವರು ಮನೆ, ನೀರಿದ್ದರೆ ಕೆರೆ ಭಾವಿ.
೧೦೬೩ ತಾಯಿ ಇಲ್ಲದ ತೌರು, ಕಾಟಕರಿದ್ದಡವಿ.
೧೦೬೪ ತಾಯಿ ವೊಂದಾದರೂ ಬಾಯಿ ಬೇರೆ.
೧೦೬೫ ತಾಯಿ ಕಲಿಸಿದ ಊಟ, ತಂದೆ ಕಲಿಸಿದ ಬುದ್ಧಿ.
೧೦೬೬ ತಾಯಿಗಿಂತಾ ಬಂಧುವಿಲ್ಲ, ಉಪ್ಪಿಗಿಂತಾ ರುಚಿ ಇಲ್ಲ.
೧೦೬೭ ತಾಯಿಗೆ ಕಂಡರೆ ತಲೆ ನೋವು.
೧೦೬೮ ತಾಯಿಗೆ ಕುಲವಿದ್ದರಷ್ಟೆ, ಮಗಳಿಗೆ ಕುಲ.
೧೦೬೯ ತಾಯಿಗೆ ಶೇರದ್ದು ನಾಯಿಗೂ ಶೇರದು.
೧೦೭೦ ತಾಯಿ ಬೇಕು, ಇಲ್ಲವೆ ಬಾಯಿ ಬೇಕು.
೧೦೭೧ ತಾಯಿ ಮಾರಿಯಾದರೆ ತರಳನೆಲ್ಲಿ ಹೋದಾನು.
೧೦೭೨ ತಾ ಕಳ್ಳನಾದರೆ ಪರರಿಗೆ ನಂಬ.
೧೦೭೩ ತಾ ಕಾಣದ ದೇವರು ಪೂಜಾರಿಗೆ ವರಾ ಕೊಟ್ಟೀತೇ.
೧೦೭೪ ತಾಗದೆ ಬಾಗದು, ಬಿಸಿಯಾಗದೆ ಬೆಣ್ಣೆ ಕರಗದು.
೧೦೭೫ ತಾತಾಚಾರ್ಯರ ಮನೆಗೆ ಯೇನಪ್ಪಣೆ.
೧೦೭೬ ತಾನಾಗಿ ಬೀಳುವ ಮರಕ್ಕೆ ಕೊಡಲೀ ಹಾಕಿದ ಹಾಗೆ.
೧೦೭೭ ತಾನುಂಟೋ ಮೂರು ಲೋಕ ಉಂಟೋ.
೧೦೭೮ ತಾನು ಜಾರಿ ಬಿದ್ದು ಉಣ್ಣೆ ಯೆಂತ ನೆಲ ಅಂದ.

೧೦೭೯ ತಾನು ತಿಂಬೋದು ಪಲ್ಲೇಸಪ್ಪು, ಹಿರೇ ಕುದುರೇ ಚೇಷ್ಟೆ.

೧೦೮೦ ತಾನು ಬಾಳಲಾರದೆ ವಿಧಿಯ ಬೈದಂತೆ.

೧೦೮೧ ತಾನು ಸಾಯ ಬೇಕು, ಸ್ವರ್ಗ ಪಡಿಯ ಬೇಕು.

೧೦೮೨ ತಾನು ಹೋದರೆ ಮಜ್ಜಿಗಿಲ್ಲ, ಮೊಸರಿಗೆ ಚೀಟು.

೧೦೮೩ ತಾನೂ ಕುಡಿಯ, ಕುಡಿಯುವನಿಗೂ ಬಿಡ.

೧೦೮೪ ತಾನೊಂದೆಣಿಸಿದರೆ ದೈವವೊಂದೆಣಿಸಿತು.

೧೦೮೫ ತಾಪತ್ರಯದವನಿಗೆ ತಾಪೆ ಯಾಕೆ.

೧೦೮೬ ತಾಯಂತಾ ಕರು ನಾಯಂತಾ ಬಾಲ.

೧೦೮೭ ತಾಯಂತೆ ಮಕ್ಕಳು, ನೂಲಂತೆ ಶಾಲೆ. [ಡವ್ರೋ.

೧೦೮೮ ತಾರಕ್ಕೆ ಮೂರು ಸೇರು ಉಪ್ಪಾದರೂ ತರುವದಕ್ಕೆ ಗತಿ ಬ್ಯಾ

೧೦೮೯ ತಾರಕ್ಕೊಂದು ಶೀರೆಯಾದರೂ ಸಾಯಿ ಬತ್ತಲೆ. [ಕನಲ್ಲ.

೧೦೯೦ ತಾರತಮ್ಯವರಿಯದವ ಧೊರೆಯಲ್ಲ, ಮಾತು ಮೀರಿದವ ಸೇವ

೧೦೯೧ ತಾರುಣ್ಯವೇ ರೂಪು, ಕಾರುಣ್ಯವೇ ಗುಣ.

೧೦೯೨ ತಾರು ಮಾರು ಮಾಡುವವನಿಗೆ ಯಾರು ತಾನೆ ನಂಬ್ಯಾರು.

೧೦೯೩ ತಾರೇ ಬಡ್ಡಿ ನೀರಾ ಯೆಂದರೆ ತರುವೆನು ನಿಲ್ಲೋ ತಿರುಕ ಮುರುವ.

೧೦೯೪ ತಾರೇ ಮರದ ಕಾಯಾದರೂ ಕರದರೆ ಬಂದೀತೇ.

೧೦೯೫ ತಾವರೆಗೆ ಆಪ್ತನೇ ವೈರಿ.

೧೦೯೬ ತಾವು ಮೂಡುವದು ಗಂಧರ್ವರು ಮಾಡಿದರು.

೧೦೯೭ ತಾಸಿಗೊಂದು ಕೂಸ ಹೆತ್ತರೆ ಈಸೀಸು ಮುತ್ತು.

೧೦೯೮ ತಾಸಿನ ಗೊತ್ತು ದಾಸಿಗೆ ತಿಳಿದೀತೇ.

೧೦೯೯ ತಾಸಿನ ಬಟ್ಟಲು ನೀರ ಕುಡಿದರೆ ತಾಸಿಗೆ ಕೊಡತೀ ಪೆಟ್ಟು.

೧೧೦೦ ತಾಳ ತಪ್ಪಿದರೆ ಕುಣಿಯೋದು ತಪ್ಪುವದಿಲ್ಲ.

೧೧೦೧ ತಾಳದಲ್ಲಿ ಜಾನನಾದರೆ ತಾಳಿಕೆ ಇದ್ದೀತೇ.

೧೧೦೨ ತಾಳಲಾರದ ವಿರಹ ತಿಣಿಕಿದರೆ ಹೋದೀತೇ.

೧೧೦೩ ತಾಳಿಕೆ ಉಳ್ಳವನಲ್ಲಿ ಕೇಳಿದರೆ ಕಾಳು ಸಿಕ್ಕುವದು.
೧೧೦೪ ತಾಳಿದವ ಬಾಳ್ಯಾನು.
೧೧೦೫ ತಾಳೇಮರ ಉದ್ದವಾದರೆ ಕೋಳಿಗೆ ಬಂದದ್ದೇನು.
೧೧೦೬ ತಾಳೇಮರ ದೊಡ್ಡದಾದರೂ ತಾಳೇ ಹೂವಿಗೆ ಸರಿಯಾದೀತೇ.
೧೧೦೭ ತಾಳೇ ಹಣ್ಣು ತಾನೇ ಬಿದ್ದರೂ ಬಾಳದ ಮುರವಗೆ ಬಾಯಿ ಮು
೧೧೦೮ ತಾಳ್ಮೆ ಇದ್ದ ಪುರುಷನಲ್ಲಿ ಬೀಳು ಬಿದ್ದರೆ ಬಾಳ್ಯಾನು. [ಚ್ಚಿತು.
೧೧೦೯ ತಿಂಗಳು ದಾಟಿದರೂ ಮಂಗಳ ದಾಟಲಿಲ್ಲ.
೧೧೧೦ ತಿಂಗಳು ಹೋದರೂ ಅಂಗಳ ದಾಟಲಿಲ್ಲ.
೧೧೧೧ ತಿಂಡಿ ಹೆಚ್ಚಿ ತಿರುಮುತ್ತೂರಿಗೆ ಹೋದರೆ ತಿರುಪುಟ್ಟಿ ಕೈಗೆ ಬಂತು.
೧೧೧೨ ತಿಂದರೆ ದಕ್ಕದು ಮಂದೇ ಹಣ.
೧೧೧೩ ತಿಂದವನು ಬಿಡ, ಕಂಡವನು ಕೊಡ.
೧೧೧೪ ತಿಕಮುಖ ವೊಂದೇ ತಿಪ್ಪಾಭಟ್ಟರಿಗೆ
೧೧೧೫ ತಿಗಳ ತಾ ಕೆಡುತ್ತಾ ಯೇಳು ನೆರೇ ಕೆಡಿಸಿದ. [ಬೇಡ.
೧೧೧೬ ತಿಗಳಿತ್ತಿ ಬಾಯಿ ಕೆಣಕ ಬೇಡ, ಬಗುಳ್ಳೋ ನಾಯಿ ಬಡಿಯ
೧೧೧೭ ತಿಥೀ ಮೇಲೆ ತಿಥಿ ಬರಲೋ ಗೋವಿಂದ.
೧೧೧೮ ತಿಪ್ಪಯ್ಯಗೆ ಸೂಜಿ ಮೇಲು, ಕಳ್ಳಗೆ ಬಾಯಿ ಮೇಲು.
೧೧೧೯ ತಿಪ್ಪೇ ಮೇಲಣ ಅರಿವೆಯಾದರೂ ಕಾಲಿಗೆ ಕಟ್ಟಿದರೆ ಬಿರುದು.
೧೧೨೦ ತಿಪ್ಪೇ ಮೇಲಿಣ ದೀಪ ಉಪ್ಪರಿಗೆ ಮೇಲೆ ಬಂದೀತೋ.
೧೧೨೧ ತಿಪ್ಪೇ ಮೇಲೆ ಕುಂದ್ರುವವಗೆ ತಕ್ಯ ಯಾತಕ್ಕೆ.
೧೧೨೨ ತಿಪ್ಪೇ ಮೇಲೆ ಮಲಗಿ ಉಪ್ಪರಿಗೇ ಕನಸು ಕಂಡ ಹಾಗೆ.
೧೧೨೩ ತಿಪ್ಪೇ ಮೇಲೆಯೇ ಮುಪ್ಪಾದ ಕುಂಬಾರ ತಿಪ್ಪ.
೧೧೨೪ ತಿಮರು ತುರಿಸಿದರೆ ಅರಸಿನ ಹಾಗೆ.
೧೧೨೫ ತಿರಿಚಿನಾಪಳ್ಳಿಗೆ ತಿರಿದುಂಬೋದಕ್ಕೆ ಇಲ್ಲಿಂದ ಕೈ ಸವರಿಸ ಬೇಕೇ.
೧೧೨೬ ತಿರಿ ತಿರಿಗಿ ಗೋಕರ್ನಕ್ಕೆ ಹೋಗಿ ತುರುಕನಿಂದ ಚೆಬ್ಬೆ ತಿಂದ.

೧೧೨೭ ತಿರಿತಿರಿಗಿ ತಿಮ್ಮಪ್ಪನ ಹತ್ತಿರ ಹೋದರೆ ತಿರಿದುಂಬೋದು ತ
೧೧೨೮ ತಿರಿದುಂಬುವದಕ್ಕೆ ಬೀದಿ ಹಂಚಿ ಕೊಂಡ ಹಾಗೆ. [ಪ್ಪೀತೇ.
೧೧೨೯ ತಿರುಕನ ಬಳಿಗೆ ತಿರುಕ ಹೋದರೆ ಮರುಕತಾ ಬರುವದೇ.
೧೧೩೦ ತಿರುಕನಿಗೆ ಮುರುಕು ಇದ್ದಾಗ್ಯೂ ತಿರಿದುಂಬುವದು ತಪ್ಪದು.
೧೧೩೧ ತಿರುಪತಿ ಕ್ಷೌರಕರು ತಲೇ ಬೋಳಿಸಿದ ಹಾಗೆ.
೧೧೩೨ ತಿರುಪಿನಂತಿರ ಬೇಕು ತಿಳಿದವ.
೧೧೩೩ ತಿರುಮಲದೇವರಿಗೆ ಹೋಗಿ ಮಲಮೂತ್ರಾ ಬಯಸಿ ಕೊಂಡ.
೧೧೩೪ ತಿರುಳು ತಿಂದರೂ ಮರುಳು ಹೋಗಲಿಲ್ಲ.
೧೧೩೫ ತಿರುಳು ಹೋಗಿ ಬೆಂಡು ಉಳೀತು.
೧೧೩೬ ತಿರೋ ಕಲ್ಲು ಘಾಳಿಯಿಂದ ಹಾರುವದೋ.
೧೧೩೭ ತಿರೋ ಕಲ್ಲು ಮಳೇಲಿ ಬಿದ್ದರೆ ಮರಕ್ಕಿಂತಾ ಕಡೆಯಾದೀತೇ.
೧೧೩೮ ತಿವಾಸಿ ಯಾತಕ್ಕೆ ತಿಪ್ಪೇ ಮೇಲಣವಗೆ.
೧೧೩೯ ತಿವಿ ಕೊಂಡರೆ ಬಂದೀತೆ ತಿಮ್ಮಪ್ಪನ ದಯೆ.
೧೧೪೦ ತಿಳಿದ ಕಳ್ಳ ತಿರಿಗಿದರೂ ಬಿಡ.
೧೧೪೧ ತಿಳಿದವನಾದರೂ ಮಲಮೂತ್ರ ಬಿಟ್ಟೀತೇ.
೧೧೪೨ ತಿಳಿದವ ಮಾಡ್ಯಾನು ನಳಪಾಕವ.
೧೧೪೩ ತಿಳಿದು ವೊಡ್ಡೋ ತೀರು ಬಾಣವ.
೧೧೪೪ ತಿಳೋಕ್ಕಿಲ್ಲ ನೋಡೋಕ್ಕಿಲ್ಲ ಹುಚ್ಚ ಮೂಕನ ಆಟ.
೧೧೪೫ ತೀಟಿ ಆದರೆ ತಾನೇ ಬರುತ್ತಾನೆ.
೧೧೪೬ ತೀಡಿದರೂ ನೋಡನು ಅಂಧಕನು ರೂಪನ.
೧೧೪೭ ತೀರಕ್ಕೆ ಬಂದ ಮೇಲೆ ತೆರೆಯ ಭಯವೇ.
೧೧೪೮ ತೀರದ ಕಾರ್ಯ ಹಾರಿದರೂ ಆಗದು.
೧೧೪೯ ತೀರದಲ್ಲಿರುವ ಮರಕ್ಕೆ ನೀರು ಯಾತಕ್ಕೆ.
೧೧೫೦ ತೀರಿದ ಅಡಿಗೆ ತಿರಿಗಿ ಬಯಸಿದರೆ ಬಂದೀತೇ.

೧೧೫೧ ತೀರ್ಥಕ್ಕಿಂತ ಶ್ರೇಷ್ಟವಿಲ್ಲ, ಪಾರ್ಥಗಿಂತ ಧೊರೆ ಇಲ್ಲ.
೧೧೫೨ ತುಂಗಭದ್ರೆಗೆ ಮಂಗ ಹೋದರೆ ಭಂಗ ಬಡೋದು ತಪ್ಪೀತೇ.
೧೧೫೩ ತುಂಟ ಕುದುರೆಗೆ ಗಂಟು ಲಗಾಮು.
೧೧೫೪ ತುಂಟನ ಕೈಯಲ್ಲಿ ಗಂಟು ಕೊಟ್ಟರೆ ಬಂಟನಂತಿರುವನು.
೧೧೫೫ ತುಂಟನ ಮನೆಗೆ ನಂಟರು ಬಂದರೆ ಗಂಟೆಗಿಂತ ಕಡೆ.
೧೧೫೬ ತುಂಟನಿಗೆ ನಂಟರೆಲ್ಲ ಬಂಟರ ಹಾಗೆ.
೧೧೫೭ ತುಂಡಿಲ್ಲದವನಿಗೆ ತುಂಟನ ಭಯವೇನು. [ಡಿಸಿದರು.
೧೧೫೮ ತುಂಡು ತುಂಡು ಧೊರೆಗಳು ಕೂಡಿ ಹಿಂಡು ಹಿಂಡು ಸೈನ್ಯ ಕೂ
೧೧೫೯ ತುಂಡು ಪಿಂಡ ಸಿಕ್ಕಿದ ಮೇಲೆ ಮುಂಡೆಗ್ಯಾರ ಹಂಗು ಯೇನು.
೧೧೬೦ ತುಂಡು ಮಾಡಿದರೂ ನೀರು ವೊಂದಾಗದೆ ಇರದು.
೧೧೬೧ ತುಂತುರು ಮಳೆಯಿಂದ ತೂಬಿನ ಕೆರೆ ತುಂಬೀತೇ.
೧೧೬೨ ತುಂಬಾ ಹೊಯ್ದರೂ ಹಂಬಲು ಹೋಗದು.
೧೧೬೩ ತುಂಬಿದ ಕೊಡ ತುಳುಕೋದಿಲ್ಲ.
೧೧೬೪ ತುಂಬಿದ ಮನೆಗೆ ಉಡು ಶೇರಿದ ಹಾಗೆ.
೧೧೬೫ ತುಂಬೆ ಬಂದು ಬಂಧನದಲ್ಲಿ ಸಿಲುಕಿದರೆ ಬಂದು ಬಿಡಿಸುವವರ್ಯಾರು.
೧೧೬೬ ತುಂಬೆಯಲ್ಲಿ ಬಿಳ್ಪು ಇಲ್ಲ, ಕೊಕ್ರೆಯಲ್ಲಿ ಕಪ್ಪು ಇಲ್ಲ.
೧೧೬೭ ತುಂಬೇಸ್ವರ ಚಂದ, ರಂಭೇ ಯೌವನ ಚಂದ.
೧೧೬೮ ತುಕ್ಕಡಿಯಲ್ಲಿ ತುಕ್ಕಡಿದಾರ ಶೇರಿ ತುಕ್ಕಡಿ ಯೆಲ್ಲ ಸುಡಿಸಿದ.
೧೧೬೯ ತುಕಡಿ ಇಲ್ಲದವಗೆ ತಕ್ಕಡಿ ಯಾಕೆ.
೧೧೭೦ ತುಕ್ಕ ಹಿಡಿದ ಖಡ್ಗ ಮಿಕ್ಕಿದವನಿಗೂ ಆಗದು. [ಳೋದು ವಾಸಿ.
೧೧೭೧ ತುಚ್ಛನ ಸಂಗಡ ಬಾಳೋಕ್ಕಿಂತಲೂ ಹುಚ್ಚನ ಸಂಗಡ ಬೀ
೧೧೭೨ ತುಚ್ಛ ಮಾತು ಆಡುವವನು ಹುಚ್ಚನಿಂದ ಕಡೆ.
೧೧೭೩ ತುಟಿಗೆ ತುಪ್ಪವಿಲ್ಲ, ಕಟಿಗೆ ಪಂಚಾರ್ತಿ ಬಯಸಿದ ಹಾಗೆ.
೧೧೭೪ ತುಟಿ ಸುಮ್ಮನಿದ್ದರೂ ಹೊಟ್ಟೆ ಸುಮ್ಮನಿರದು.

೧೧೭೫ ತುಟೀ ಕಟ್ಟಿದ ಮೇಲೆ ಮಠದ ಭೋಜನ ಯಾಕೆ.
೧೧೭೬ ತುಟೀ ಮೀರಿದ ಹಲ್ಲು, ಮಠಾ ಮೀರಿದ ಕಂಬ.
೧೧೭೭ ತುಟೀ ಮೇಲೆ ದೀಪ ಹಚ್ಚಿದ ಹಾಗೆ.
೧೧೭೮ ತುಟ್ಟಿಯಾದಾಗ ಕೊಟ್ಟರೆ ಬಟ್ಟಗಾವ.
೧೧೭೯ ತುತೂರೀ ಊದಿದರೆ ತುಪಟ ಬಂದೀತೇ.
೧೧೮೦ ತುತೂರಿ ಧ್ವನಿ ಕೇಳಿ ತುರಿಸಿ ಕೊಂಡು ವೋಡಿ ಹೋದ.
೧೧೮೧ ತುತ್ತು ಕೈಗೆ ಬಂದರೂ ಮತ್ತೆ ಬಾಯಿಗಿಲ್ಲ.
೧೧೮೨ ತುತ್ತು ತುತ್ತಿಗೆ ಬ್ರಹ್ಮಾರ್ಪಣವೋ.
೧೧೮೩ ತುತ್ತು ಸಿಕ್ಕಿದರೆ ತೊತ್ತು, ಆಗಿದ್ದಾಳು.
೧೧೮೪ ತುದಿಯಲ್ಲಿ ಕಾಣುವದು ಮದುವೇ ಗುಣ.
೧೧೮೫ ತುದಿಯಲ್ಲಿ ಇದ್ದವ ಯೆಂಗಿದ್ದರೂ ಕೆಳಗೆ.
೧೧೮೬ ತುಪ್ಪ ಅನ್ನ ಉಣ್ಣಲಿಕ್ಕೆ ನಾಯಿ ಉಚ್ಚೇಲಿ ಕೈ ತೊಳಸಿದ.
೧೧೮೭ ತುಪ್ಪದಂತ ಮಾತಿಗೆ ವೊಪ್ಪಿ ಕೊಂಡು ತಿಪ್ಪೇ ಪಾಲಾದ.
೧೧೮೮ ತುಪ್ಪಕ್ಕೆ ಮುಪ್ಪು ಬಂದರೆ ಸಂದು ಕೂಡಿಸುತ್ತದೆ, ಮನುಷ್ಯನಿಗೆ ಮುಪ್ಪು ಬಂದರೆ ಮಣ್ಣು ಕೂಡಿಸುತ್ತದೆ.
೧೧೮೯ ತುಪ್ಪದ ಆಶೆಗೆ ಯೆಂಜಲು ತಿಂದ.
೧೧೯೦ ತುಪಾಕಿ ಹೊಟ್ಟೇಲಿ ಫಿರಂಗಿ ಹುಟ್ಟಿದ ಹಾಗೆ.
೧೧೯೧ ತುಫಾನು ಬಂದ ಮೇಲೆ ತಬ್ಬಿ ಕೊಂಡರೆ ಆದೀತೇ.
೧೧೯೨ ತುಬ್ಬಾಗದ ಕಳವು ಮಬ್ಬಾದ ಮೇಲೆ ಸಿಕ್ಕೀತೇ.
೧೧೯೩ ತುರಂಗಕ್ಕೂ ಕುರಂಗಕ್ಕೂ ಸಮವೋ.
೧೧೯೪ ತುರಿ ಇದ್ದವಗೆ ನಾಚಿಕೆ ಇಲ್ಲ, ಮರೆ ಇದ್ದವಗೆ ಮಂದತ್ವವಿಲ್ಲ.
೧೧೯೫ ತುರಿ ಇರುವಲ್ಲಿ ತುರಿಸುವದು.
೧೧೯೬ ತುರಿಸಿ ಕೊಂಡರೆ ಬರ ಬಿಟ್ಟೀತೇ.
೧೧೯೭ ತುರಿಸಿ ಕೊಂಡವ ಉರಿ ಪಟ್ಟಾನು.

೧೧೯೮ ತುರು ಇಲ್ಲದವ ಮರಕ್ಕಿಂತ ಕಡೆ.
೧೧೯೯ ತುರುಕ ಮಿಂಡ ಬರುವಾಗ್ಯೆ ಯೆದುರು ಚುಕ್ಕಿಯೇ.
೧೨೦೦ ತುರುಕರ ಸಂಗ ಯೆಂದಿಗಾದರೂ ಭಂಗ.
೧೨೦೧ ತುರುಬು ಇಲ್ಲದವಳಿಗೆ ತಾಳೇ ಹೂವೇ.
೧೨೦೨ ತುಳಿದ ಧಾನ್ಯ ಮಳಲು ಸಮವೋ.
೧೨೦೩ ತುಳುವರಸನ ರಾಜ್ಯ ತುರುಕರು ಬಂದ ಮೇಲೆ ನಿಂತೀತೇ.
೧೨೦೪ ತುಳ್ಳಾಡಿ ತುಳ್ಳಾಡಿ ಮುಳ್ಳಿನ ಮೇಲೆ ಬಿದ್ದ.
೧೨೦೫ ತೂಕಕ್ಕೆ ದಯವಿಲ್ಲ, ಪಾಕಕ್ಕೆ ಹಸಿ ಇಲ್ಲ.
೧೨೦೬ ತೂಕದ ಗುರುತ ಸೂಕರ ಬಲ್ಲದೇ.
೧೨೦೭ ತೂಕದಿಂದಿರುವವನು ನಾಕಕ್ಕೆ ಬೇಕು.
೧೨೦೮ ತೂಕವಿದ್ದದ್ದು ತೂಗ್ಯಾಡೀತೇ.
೧೨೦೯ ತೂಗಲಾರದ ಬಡ್ಡಿ ಕೂಗಿ ಕರದಾಳೇ.
೧೨೧೦ ತೂತು ಬಿದ್ದದ್ದು ಮಾತಿನಿಂದ ಮುಚ್ಚೀತೇ.
೧೨೧೧ ತೂಬು ಉಳ್ಳ ಕೆರೆಯು ತುಳುಕಿದರೆ ಬತ್ತೀತೇ.
೧೨೧೨ ತೂರುವಾಗ್ಯೆ ಹಾರಿದ್ದೆಲ್ಲ ಮಾರೀ ಪಾಲು. [ಬೇಕು.
೧೨೧೩ ತೂಳು ಬಂದು ಹೇಳಿದ ಮಾತು ಮೂಳ ನಾಯಿ ಹಾಗೆ ಕೇಳ
೧೨೧೪ ತೃಣವಾದರೂ ಹಣಾ ಕೂಡಿಸುತ್ತದೆ.
೧೨೧೫ ತೃಪ್ತನಿಗಾದರೂ ಮೃತ್ಯು ತಪ್ಪದು.
೧೨೧೬ ತೃಷೆ ಆದವಗೆ ಮಶಿ ಕೆಂಡ ತಂದು ಕೊಟ್ಟ.
೧೨೧೭ ತೃಪೆ ಇಲ್ಲದವ ಋಷಿಗೆ ಸಮಾನ.
೧೨೧೮ ತೆಂಕಣ ಘಾಳಿ ಮಂಕು ಮಳೆ ಬರಸೀತು.
೧೨೧೯ ತೆಂಕಣ ದೇಶಕ್ಕೆ ಹೋಗಿ ಕೊಂಕಣ ಕೆಟ್ಟ.
೧೨೨೦ ತೆಂಗಿನ ಮರಕ್ಕೆ ಪಟ್ಟೇ ಶೀರೆ ಕಟ್ಟಿದ.
೧೨೨೧ ತೆಂಗಿನ ಮರ ತೆಂಕಲಾಗಿ ಹೆಚ್ಚು.

೧೨೨೨ ತೆಂಗಿನಮರ ಯಾಕೆ ಹತ್ತುತ್ತಿ ಅಂದರೆ ಬೆಕ್ಕಿಗೆ ಹುಲ್ಲು ಕೊಯ್ಯೋದಕ್ಕೆ ಅಂದ.
೧೨೨೩ ತೆಂಗಿನಮರ ಯೇರುವವನ ತಿಕಾ ಯೆಲ್ಲಿ ತನಕ ಹಿಡಿದಾನು.
೧೨೨೪ ತೆಕ್ಕೆ ಇಲ್ಲದ ಯೆತ್ತು ಬಿಕ್ಕಿ ಪಳ್ಕಿರಿದಂತೆ.
೧೨೨೫ ತೆಗದು ಕೊಂಡಷ್ಟು ಮುಗದರೆ ಮಗನಿಗೇನು ಉಳದೀತು.
೧೨೨೬ ತೆತ್ತಷ್ಟು ಬಾಕಿ ಬಿದ್ದರೆ ಮತ್ತೇನು ಕೊಟ್ಟಾನು.
೧೨೨೭ ತೆಪ್ಪ ಹರಿದರೆ ದೋಣಿ.
೧೨೨೮ ತೆಪ್ಪ ಹರಿದರೆ ಮುಪ್ಪಿನವನೇ ಸಾಯುವನೋ.
೧೨೨೯ ತೆರದ ಕಿಟಿಕಿಯಿಂದ ಬೆಕ್ಕು ಹೊಕ್ಕಿತು.
೧೨೩೦ ತೆರದು ಬಂದ ಬಾಗಲಿಂದ ಕಳ್ಳ ಹೊಕ್ಕ. [ರಿಸಿ ಕೊಂಡ.
೧೨೩೧ ತೆರಪು ಇಲ್ಲವೆಂತ ತೆರಿಗೇ ಇಟ್ಟು ಕೊಂಡು ಚರಿಗೆತಪಲೇ ಮಾ
೧೨೩೨ ತೆರಲಾಪರೆ ಹೊಸೆಯಾಗು.
೧೨೩೩ ತೆರೆಯಲಾರದ ಕಣ್ಣು, ಹೊರಲಾರದ ಹೊರೆ.
೧೨೩೪ ತೆರೇ ಕೊಟ್ಟು ಮೊರಾ ಕೊಂಡ.
೧೨೩೫ ತೆರೇ ತೆಗದು ನೀಯೋದುಂಟೇ.
೧೨೩೬ ತೆಳುಪಾದ ಮೈ, ಬೆಳುಪಾದ ಗಂಪು.
೧೨೩೭ ತೇಗಿಗಿಂತ ಗಟ್ಟಿ ಇಲ್ಲ, ಜೋಗಿಗಿಂತ ಕುಂಬು ಇಲ್ಲ.
೧೨೩೮ ತೇಗಿ ತೇಗಿ ಬಾಗಿ ಬಿದ್ದ.
೧೨೩೯ ತೇಗು ಬಂದು ಪಾಗು ಹರೀತು.
೧೨೪೦ ತೇಜ ಇದ್ದವನೇ ಪೂಜ್ಯ.
೧೨೪೧ ತೇಜವಿದ್ದದ್ದು ಮಾಜ ಕೂಡೀತೇ.
೧೨೪೨ ತೇಟೀಗಂಜಿ ಕುಡಿಯೋನಿಗೆ ಯೇಟೀಟು ಪಾರುಪತ್ಯ.
೧೨೪೩ ತೇಟೀ ನೀರು ಪೋಟೀ ಅಡೀಲಿ ಇದ್ದರೆ ಕಾಟ ಬಂದೀತೇ.
೧೨೪೪ ತೇಮಾನದಿಂದ ಹೋಮಾ ಮಾಡಿ ಗುಮಾನ ಪಟ್ಟ.

೧೨೪೫ ತೇರಾಟಕ್ಕೆ ಹೋಗಿ ಹೋರಾಟಾ ಮಾಡಿ ಕೊಂಡ.
೧೨೪೬ ತೇರಾದ ಮೇಲೆ ಜಾತ್ರೆ ನೆರೀತು.
೧೨೪೭ ತೇರು ಆಯಿತು, ಹೇರು ಮಾತ್ರ ವ್ಯರ್ಥ ತಂದೆ.
೧೨೪೮ ತೈಲದ ಗುಣ ನೌಲು ತಿಳಿದೀತೋ.
೧೨೪೯ ತೊಂಡೆ ತಿಂದು ಮಂಡೆ ಬೆಳೀತು.
೧೨೫೦ ತೊಂತಿಗೆ ವೊಂದು ಕಂತು ಮಾಡ ಬೇಕೇ.
೧೨೫೧ ತೊಂಭತ್ತರ ಮೇಲೆ ತೊಗರೀಬೇಳೆ.
೧೨೫೨ ತೊಗಲು ತೊಳೆ ಆದೀತೇ.
೧೨೫೩ ತೊಗಲು ಸಡಲಿ ಮುಪ್ಪು, ಹಗಲು ಸಡಲಿ ಇರುಳು.
೧೨೫೪ ತೊಟ್ಟಿತೊಳಗಣ ಕೂಸಾದರೂ ಅತ್ತ ಹೊರ್ತು ಹಾಲು ಕೊಡರು.
೧೨೫೫ ತೊಟ್ಟು ಮುರಿದಡಿ ಅಟ್ಟಿದರೆ ಹೋಗಿ ತಟ್ಟೀತೇ.
೧೨೫೬ ತೊಟ್ಟೀ ಕಟ್ಟಿ ಕೊಂಡು ಮೊಟ್ಟೀ ಹೊತ್ತ.
೧೨೫೭ ತೊಡೇ ಸೋಕಿದ ನಾಯಿ ವೊಡೆಯನ ಗುರ್ತ ಬಲ್ಲದೇ.
೧೨೫೮ ತೊಣಪೇ ಶಾಸ್ತ್ರಕ್ಕೆ ಹೆಣಗೋದೇ ಅರ್ಥ.
೧೨೫೯ ತೊತ್ತಿಗೆ ವೊಂದು ಪಡಿತೊತ್ತು. [ಹೇಳಿದರೆ ಬಿಟ್ಟೇತೇ.
೧೨೬೦ ತೊನ್ನು ಹತ್ತಿದವ ಹೊನ್ನು ಖರ್ಚು ಮಾಡುತ್ತೇನೆಂದು ಗನ್ನಾ
೧೨೬೧ ತೊಪ್ಪು ಬರುವದೇ ಹೆಪ್ಪಿಗೆ.
೧೨೬೨ ತೊರದವನಿಗೆ ಬರದ ಹಂಗೇನು.
೧೨೬೩ ತೊಲೆಯಿಂದ ಹಲವಾಗುತ್ತದೆ, ಹೊಲೆಯಿಂದ ಭ್ರಷ್ಟವಾಗುತ್ತದೆ.
೧೨೬೪ ತೊಳಲಿದರೂ ಬಳಲೋದು ತಪ್ಪೀತೇ.
೧೨೬೫ ತೋಟ ಮೂರು ಮೊಳ, ಕಾಯಿ ಆರು ಮೊಳ. [ಸಾಕ್ಷಿ.
೧೨೬೬ ತೋಡಿದ ಭಾವಿಗೆ ಜಲವೇ ಸಾಕ್ಷಿ, ಮಾಡಿದ ಪಾಪಕ್ಕೆ ಮನವೇ
೧೨೬೭ ತೋರಸಾದವ ಹಾರನು, ಧೀರಸಾದವ ದೂರನು.
೧೨೬೮ ತೋರಿಸಿ ಕೊಟ, ಗುರು ಯೇರಿಸಲಿಕ್ಕೆ ಒಲ್ಲನೇ.

೧೨೬೯ ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು.

೧೨೭೦ ತೋಳು ಪೂಜಿಸಿ ಕೊಳ್ಳುವದಕ್ಕೆ ಹೋಗಿ ಮೂಳನಾದ.

೧೨೭೧ ತ್ಯಾಗೀ ಗುಣ ಭೋಗದಲ್ಲಿ ಕಾಣುವದು.

೧೨೭೨ ತ್ಯಾಜ್ಯಾ ಮಾಡಿ ವ್ಯಾಜ್ಯಾಪಾಡಿದ.

೧೨೭೩ ತ್ರಾಣವಿದ್ದವನ ಸಂಗಡ ಹೋಗಿ ತಾಡಿಸಿ ಕೊಂಡ.

೧೨೭೪ ತ್ವರೆ ಪಟ್ಟರೆ ಮರೆಯಾಗುವದು.

೧೨೭೫ ಥರವಲ್ಲದ ಮಾತು ಮರಾ ಯೇರಿದರೂ ಆದೀತೇ.

೧೨೭೬ ಥಾಟುಗಾರನು ಆಟಕ್ಕೆ ಹೋಗಿ ಪೋಟಗಾರನಾಗಿ ಬಿದ್ದ.

೧೨೭೭ ದಂಟು ಮುರಿದರೆ ಕಂಠವಾದೀತೇ.

೧೨೭೮ ದಂಡ ಬಿದ್ದರೆ ಮುಂಡೇಗೊಡವೆ ಯಾತಕ್ಕೆ.

೧೨೭೯ ದಂಡ ಬೇರೆ, ಮುಷ್ಟಿಗೋಲು ಬೇರೆ.

೧೨೮೦ ದಂಡಾಗಲಿ ಥಾಳಿಯಾಗಲಿ ಉಂಡಿರು ಮಗನೆ.

೧೨೮೧ ದಂಡಾ ತೆತ್ತವನೂ ಉಂಡು ಹೇತವನೂ ಪೊಂದೇ.

೧೨೮೨ ದಂಡಿಗೇ ಮೇಲೆ ನಾಯಿಗೆ ಕುಂದ್ರಿಸಿದರೆ ಹೇಲು ಕಂಡು ಹಾರಿತು.

೧೨೮೩ ದಂಡಿಗೆ ಹೊರೋ ಭೋಯೆರು ಕರಾ ಹುಡುಕ್ಯಾರೇ.

೧೨೮೪ ದಂಡಿನ ಸುದ್ದೀ ಕೇಳ್ಳೋಕೆ ಚಂದ, ನೋಡೋಕೆ ಭಯ.

೧೨೮೫ ದಂಡಿನಲ್ಲಿಯೂ ಸೋದರ ಮಾವನೇ.

೧೨೮೬ ದಂಪತೀ ಪೂಜೆಗೆ ಹೋಗಿ ಲಂಪಟ ಅನ್ನಿಸಿ ಕೊಂಡ.

೧೨೮೭ ದಂಭವಿದ್ದವನಿಗೆ ಇಂಬು ಸಿಕ್ಕುವದು.

೧೨೮೮ ದಕ್ಕೀತು ಯೆಂದು ತಕ್ಕದ್ದಲ್ಲದ ಮಾಡ ಬಾರದು.

೧೨೮೯ ದಗೆ ಯೆಂಬುವದು ಹಗೆಯೇ ಸರಿ.

೧೨೯೦ ದಡದಲ್ಲಿದ್ದ ಮರಕ್ಕೆ ಅಡಿಯೇ.

೧೨೯೧ ದಡಿಯಾತಕ್ಕೈ ಮಡದೀ ಬಡೀಲಿಕ್ಕೆ.

೧೨೯೨ ದಡ್ಡನಿಗೆ ಹೆಡ್ಡನೆಂದರೆ ಮಡ್ಡನಿಗೆ ಜಾಣಾ ಅಂದ ಹಾಗೆ.

೧೨೯೩ ದಣಿದ ಯೆತ್ತಿಗೆ ಮಣುವೇ ಭಾರ.
೧೨೯೪ ದಣು ಪಟ್ಟವನು ಹೆಣವಾದರೂ ಹೊರನೇ.
೧೨೯೫ ದತ್ತಪುತ್ರನಿಗೆ ಪಿತೃಭಕ್ತಿ ಹುಟ್ಟುವದೋ.
೧೨೯೬ ದತ್ತಾ ಕೊಟ್ಟು ಮತ್ತೆ ಕೇಳಿದವ ಯೆತ್ತಿಗಿಂತ ಕಡೆ. [ಬಲ್ಲರು.
೧೨೯೭ ದನದ ಮನಸ್ಸನ್ನೂ ದಾಯಾದಿಯ ಮನಸ್ಸನ್ನೂ ಯಾರು
೧೨೯೮ ದನದ ಮುಂದೆ ಹೋಗ ಬೇಡ, ಕುದುರೇ ಹಿಂದೆ ಹೋಗ ಬೇಡ.
೧೨೯೯ ದನವಿನ ವರ್ಣ ಹಾಲಲ್ಲಿ ತಿಳಿದೀತೇ.
೧೩೦೦ ದನಾ ತಿಂಬುವವನಿಗೆ ಶಗಣಿ ಅಸಹ್ಯೆಯೇ.
೧೩೦೧ ದನಾ ಮೇಯಿಸುವವನಿಗೆ ಘುನ ಯಾಕೆ.
೧೩೦೨ ದಮ್ಮಯ್ಯ ಅಂದರೆ ವೊಂದು ಯೆಮ್ಮೆ ಕೊಟ್ಟ ಹಾಗೆ.
೧೩೦೩ ದಮ್ಮು ಕಟ್ಟಿ ಕೊಂಡು ಹಮ್ಮು ಕಳಕೊಂಡ.
೧೩೦೪ ದರಿ ಶೇರಿದರೂ ಹರಿಹರಿ ಯೆಂಬುವದು ಬಿಡುವದಿಲ್ಲ.
೧೩೦೫ ದವನದ ಹೂ ಅಂದಾ ಕ್ಷಣ ಹವನವಾದೀತೇ.
೧೩೦೬ ದಶೆ ಬರುವಾಗ್ಯೆ ಹಶೇ ಮೇಲೆ ರತ್ನ ಬಿತ್ತು. [ಹಡೀ ಬೇಕು.
೧೩೦೭ ದಳವೂ ದಪ್ಪವೂ ಅಗಲವೂ ಇರ ಬೇಕು, ಕಾಸು ಮೂರು ಕ್ರಯ
೧೩೦೮ ದಳಾ ನಡಿಸೋ ಬಂಟ ಬತ್ತಿ ನೂಕ್ಯಾನೇ.
೧೩೦೯ ದಾಡಿಮದ ಬೀಜ ರತ್ನ ಆದಾವೇ.
೧೩೧೦ ದಾಯ ಬಿದ್ದಾಗ ಹಾಯ ಬೇಕು.
೧೩೧೧ ದಾರಿಗೆ ದಾರಿ ವೋಯಮ್ಮಲಾಲಾ.
೧೩೧೨ ದಾರಿ ತಪ್ಪಿದ ಮೇಲೆ ಹಾರಿ ಯೇನು ಫಲ.
೧೩೧೩ ದಾವಣಿ ಕಟ್ಟುವನಿಗಾದರೂ ಹವಣ ಬೇಕು.
೧೩೧೪ ದಾಸನಾದರೆ ದೋಶೆ ತಿಂದಾನು, ಹೂಸಿನಿಂದ ಕುಂದ್ರ ಕೂಡದು.
೧೩೧೫ ದಾಸಯ್ಯನೆತ್ತ, ದನಕರುವೆತ್ತ.
೧೩೧೬ ದಾಸಿಗೆ ಭಯವಿಲ್ಲ, ವೇಶಿಗೆ ದಯವಿಲ್ಲ.

೧೩೧೭ ದಾಹವಾದವನಿಗೆ ಹತ್ತೀ ಕುಡಿಯೋಕೆ ಕೊಟ್ಟ ಹಾಗೆ.

೧೩೧೮ ದಾಕ್ಷಿಣ್ಯಕ್ಕೆ ಬಸುರಾಗಿ ಹೆರುವದಕ್ಕೆ ತಾವಿಲ್ಲ.

೧೩೧೯ ದಾಕ್ಷಿಣ್ಯವಂತನು ದಕ್ಷಿಣಕ್ಕೆ ಹೋದರೆ ಭಕ್ಷಗೌ ಸಿಕ್ಕೀತೇ.

೧೩೨೦ ದಿಂಡು ದಂಡದ ಹಾಗಿದ್ದರೂ ದಂಡಿಗೆಗೆ ಆದೀತೇ.

೧೩೨೧ ದಿಕ್ಕಿಲ್ಲದ ಮನುಷ್ಯಗೆ ದೇವರೇ ಗತಿ.

೧೩೨೨ ದಿಕ್ಕಿಲ್ಲದವ ದೈವಾ ತಬ್ಬಿದ.

೧೩೨೩ ದಿಕ್ಕು ದಿಕ್ಕಿಗೆ ಹೋದರೂ ದುಃಖ ತಪ್ಪೀತೇ.

೧೩೨೪ ದಿನ ದಿನ ಶನಿಕಾಡಿದರೆ ಬಾಳೋದು ಯಾವಾಗ.

೧೩೨೫ ದಿನ ದಿನ ಸಾಯುವವರಿಗೆ ಅಳುವವರ್ಯಾರು.

೧೩೨೬ ದಿನ ದೀಪದಂತೆ ದಶಾಹೀನನು.

೧೩೨೭ ದಿನ ಹೋಗಿ ಮಳೆಗಾಲವೇ.

೧೩೨೮ ದಿನ್ನೇ ಮೇಲೆ ಮಳೆ ಹೊಯ್ದರೆ ಹಳ್ಳಕ್ಕೆ ಬರುವದು.

೧೩೨೯ ದಿವಸಕ್ಕೆ ತಕ್ಕ ದವಸವಾಗುವದು.

೧೩೩೦ ದೀನನ ಸಂಗಕ್ಕಿಂತಲೂ ದಾನಿಯ ಬಡದಾಟ ಲೇಸು.

೧೩೩೧ ದೀನನ ಸಿರಿಗಿಂತ ದಾನಿಯ ಬಡತನವೇ ಮೇಲು. [ಯಿತು.

೧೩೩೨ ದೀಪ ದೀಪಾಂತರಕ್ಕೆ ಹೋಯಿತು, ಬತ್ತಿ ಪರ್ವತಕ್ಕೆ ಹೋ

೧೩೩೩ ದೀಪವೆಂಬುವದು ಬೆಂಕಿಯೇ.

೧೩೩೪ ದೀವಟಿಗೆ ಮುಂದೆ ದೀಪವೇ.

೧೩೩೫ ದೀಕ್ಷೇ ಮಾಡಿದ ಹೊರ್ತು ಮೋಕ್ಷ ಬರಲಿಕ್ಕಿಲ್ಲ.

೧೩೩೬ ದುಖ್ಖದ ಮೇಲೆ ಸುಖ, ಸುಖದ ಮೇಲೆ ದುಃಖ.

೧೩೩೭ ದುಗ್ಗಾಣಿಯ ಮುಂಡೇ ಹತ್ತರ ದುಡ್ಡಿನ ದೋಶೆಗೆ ಹೋದ.

೧೩೩೮ ದುಡಿಯೋ ಯೆತ್ತು ಮಡಿದು ಬಿತ್ತು.

೧೩೩೯ ದುಡುಕು ಇದ್ದವಗೆ ಬಡತ ತಪ್ಪದು.

೧೩೪೦ ದುಡುಮೆ ಇರುವ ಪರ್ಯಂತರ ಮಡದಿ.

೧೩೪೧ ದುಡ್ಡಿಗೆ ಪಂಚ್ಛೇರು.

೧೩೪೨ ದುಮುಕಿದರೆ ದುಃಖ ಹೋದೀತೇ.

೧೩೪೩ ದುಮ್ಮಿದಿಂದ ಹಮ್ಮು ಕಳಕೊಂಡ.

೧೩೪೪ ದುರುಳನ ಕಂಡರೆ ಹರಳು ಚೆಲ್ಲ ಬೇಕು.

೧೩೪೫ ದುರುಳನ ಕಂಡಾಗ ಕೆರಳ ಬೇಕು.

೧೩೪೬ ದುರ್ಗದಲ್ಲಿರುವವಗೆ ಮಾರ್ಗದ ಗೊಡವೆ ಯಾಕೆ.

೧೩೪೭ ದುರ್ಗ ಯೇರದವ ಸ್ವರ್ಗ ಯೇರ್ಯಾನೇ.

೧೩೪೮ ದುರ್ಜನನ ಸಹವಾಸದಿಂದ ಸಜ್ಜನ ಕೆಡುವನು.

೧೩೪೯ ದುಸ್ತು ಇಲ್ಲದವನ ಮನಸ್ಸು ಸ್ವಸ್ಥವಾಗದು.

೧೩೫೦ ದುಹೀ ಮಾಡುವವ ಅಹೀ ಹಾಗೆ.

೧೩೫೧ ದೂಡಿಸಿ ಕೊಂಡ ಮನುಷ್ಯ ಹೇಡಿಗಿಂತ ಕಡೆ.

೧೩೫೨ ದೂಡಿಸಿ ಕೊಂಡವನಿಗೆ ನಾಡಿನ ಗೊಡವೆ ಯಾಕೆ.

೧೩೫೩ ದೂತತ್ವ ಮಾಡುವವನಿಗೆ ಭೀತತ್ವ ಸಲ್ಲದು.

೧೩೫೪ ದೂರಕ್ಕೆ ಬೆಟ್ಟ ನುಣ್ಣಗೆ.

೧೩೫೫ ದೂರದ ನೀರು ದಾರಿಲಿ ಸಿಕ್ಕೀತೇ.

೧೩೫೬ ದೂರವಾದ ಊರಿಗೆ ಹಾರಿ ಹೋದಾನೋ.

೧೩೫೭ ದೂರವಿದ್ದ ಮಗನಿಗೂ ಹತ್ತಿರ ಇದ್ದ ಹೆಂಡತಿಗೂ ಸರಿ ಬಾರದು.

೧೩೫೮ ದೂರು ಹೊರೋಕ್ಕಿಂತ ಮಾರಿ ಹೊರೋದುತ್ತಮ.

೧೩೫೯ ದೃಢ ಬುದ್ಧಿ ಇಲ್ಲದವ ಕಡು ಮೂರ್ಖ.

೧೩೬೦ ದೆಬ್ಬೇ ಕೊಟ್ಟು ಬೊಬ್ಬೇ ಕೊಂಡ.

೧೩೬೧ ದೆವ್ವ ಹಿಡಿದವಗೆ ದೈವದ ಯೋಚನೆ ಯೇನು.

೧೩೬೨ ದೆಶೆ ಇಲ್ಲದವ ಮಶಿಗಿಂತ ಕಡೆ.

೧೩೬೩ ದೇವರ ಗಂಟು ಹೋದರೆ ಪೂಜಾರೀ ಶಂಟ ಹೋಯಿತು.

೧೩೬೪ ದೇವರ ಸತ್ಯಕ್ಕೆ ಕಡಿಮೆಯಾದರೂ ಕಂಚಿನ ಬೆಲೆಗೆ ಕಡಿಮೆ ಇಲ್ಲ.

೧೩೬೫ ದೇವರು ಕೊಟ್ಟರೂ ಪೂಜಾರಿ ಕೊಡ.
೧೩೬೬ ದೇವಲೋಕಕ್ಕೆ ಹೋದರೂ ಭೂಲೋಕ ತಪ್ಪದು. [ಗದೇ.
೧೩೬೭ ದೇಶಾಂತರದವರಿಗೆ ಸ್ವತಂತ್ರ ಕೊಟ್ಟರೆ ತನ್ನ ಭೋಷ ಹೋ
೧೩೬೮ ದೇಶಾಂತರ ಹೋದರೂ ಸ್ವತಂತ್ರವಿರ ಬೇಕು.
೧೩೬೯ ದೇಶಾಂತರ ಹೋದರೆ ದೈವ ಬಿಟ್ಟೀತೇ.
೧೩೭೦ ದೇಶಾವರಕ್ಕೆ ಹೋಗಿ ಭೋಷ ಕಳಕೊಂಡ.
೧೩೭೧ ದೇಹವಿದ್ದರೆ ಭಾವಿಸ ಬಹುದು.
೧೩೭೨ ದೈತ್ಯನಾದವಗೆ ಪೈತ್ಯವೆಂಬುವದೇನು.
೧೩೭೩ ದೈನ್ಯದವರಿಗೆ ಮಾನ್ಯ ಮಾಡಿದರೆ ಮರಣದಲ್ಲಿ ಕಾಣುವದು.
೧೩೭೪ ದೈನ್ಯವಾಗಿ ಬೇಡೋಕ್ಕಿಂತ ದೈವಾಧೀನವಾಗೋದುತ್ತಮ.
೧೩೭೫ ದೈವದ ದಯೆ ಇದ್ದವಗೆ ದರಿದ್ರವಿಲ್ಲ.
೧೩೭೬ ದೊಂಬಗೆ ದೊಣ್ಣೆ ಯಾಕೆ, ದೊಣ್ಣೆಗೆ ಕಣ್ಣು ಯಾಕೆ. [ಮೇಲೆ.
೧೩೭೭ ದೊಂಬರ ಸಾವು ಗಣೆಯ ಮೇಲೆ, ಬಿಲ್ಲವರ ಸಾವು ಮರದ
೧೩೭೮ ದೊಂಬಿಗೆ ಹೋದವನು ಶರೀರದ ಹಂಬಲು ಬಿಟ್ಟರೆ ಲೇಸು.
೧೩೭೯ ದೊಂಬೀ ಸಾಕ್ಷಿ ಹಂಬಿಗೆ ಕಾರಣ.
೧೩೮೦ ದೊಡ್ಡವನ ಮನೇ ನೋಟ,. ಬಡವನ ಮನೇ ಊಟ.
೧೩೮೧ ದೊಡ್ಡವನಾಡಿದ್ದೇ ಆಟ, ಬಡವನಾಡಿದ್ದೇ ಭಂಡಾಟ.
೧೩೮೨ ದೊಡ್ಡವನು ಉಂಡರೆ ಮದ್ದು, ಬಡವನು ಉಂಡರೆ ಹೇಸಿಗೆ.
೧೩೮೩ ದೊಡ್ಡವರ ನಂಟತನ ಬಡವನಿಗೆ ಭಂಡಾಟ.
೧೩೮೪ ದೊಡ್ಡವರ ಮನೆಗೆ ಬಡನಂಟ ಹೋದ ಹಾಗೆ.
೧೩೮೫ ದೊಡ್ಡವರ ಸಂಗಡ ಕೂತು ಪೊಡ್ಡಾದ ಹಣ್ಣು ತಿನ್ನ ಬಾರದು.
೧೩೮೬ ದೊಡ್ಡ ಹೊಟ್ಟೆ ಇದ್ದವ ಹೆಡ್ಡನೋ.
೧೩೮೭ ದೋಣೆಗೆ ಹೋದರೂ ಹೊಣೆ ತಪ್ಪದು.
೧೩೮೮ ದೊಣ್ಣೇ ಹಿಂಡಿದರೆ ಯೆಣ್ಣೆ ಬೀಳುವದೇ.

೧೩೮೯ ದೊನ್ನೇ ತುಂಬ ತುಪ್ಪ ಹೋಯ್ದರೂ ದಮ್ಮಯ್ಯ ಯೆಂಬೋ
೧೩೯೦ ದೊಬ್ಬಿ ಹಾಕ ಬಹುದೇ ಮಬ್ಬನ್ನು. [ದು ಬಿಡ.
೧೩೯೧ ದೊರಕಿದ ಬಟ್ಟೆ ಹರಕು ಆದರೆ ನರಕೋದು ಯಾಕೆ.
೧೩೯೨ ದೊರಕಿದರೆ ಹರಕೇ ಕೊಡ ಬಹುದು.
೧೩೯೩ ದೊರೆ ಮುನಿದರೆ ಮರನೇರಿದರೆ ಆದೀತೇ.
೧೩೯೪ ದೋಟಿಯಿಂದ ಜೇನು ತೆಗದ ಹಾಗೆ.
೧೩೯೫ ದೋತ್ರ ದೊಡ್ಡದಾದರೆ ಗೋತ್ರ ದೊಡ್ಡದೇ.
೧೩೯೬ ದೋಶೆಗೆ ತೂತು, ದೋಷಿಗೆ ಮಾತು.
೧೩೯೭ ದೋಶೆ ಬಿಶಿ ಯೆಂದು ಮಶಿ ಕೆಂಡ ತಿಂದ.
೧೩೯೮ ದೋಶೇ ತಿಂದಾಕ್ಷಣ ದೋಷವೆಲ್ಲಾ ಹೋದೀತೇ.
೧೩೯೯ ದೋಶೇ ತಿನ್ನುವಾಗ ಮೀಸೆ ಮುರಿದ ಹಾಗೆ.
೧೪೦೦ ದೋಶೇ ತೂತು ಕಾವಲಿ ಮುಚ್ಚೀತೇ.
೧೪೦೧ ದೋಶೇ ಮಾಡಲಿಕ್ಕೆ ಮಾಸಿದವಳಿಂದ ಆಗದೇ.
೧೪೦೨ ದೋಶೇ ಹಿಟ್ಟು ಕೂಸಾಳಿಗೆ ಸಿಕ್ಕೀತೇ.
೧೪೦೩ ದೋಷದಿಂದ ನಾಶ.
೧೪೦೪ ದೋಷವೆಲ್ಲಾ ದೋಶೆ ನುಂಗಿತು.
೧೪೦೫ ದೋಷಾ ಮಾಡಿದವನಿಗೆ ದೂಷಣೆ ತಪ್ಪದು.
೧೪೦೬ ದೋಷಾ ಮಾಡುವವನಿಗೆ ರೋಷ ಬಹಳ.
೧೪೦೭ ದೋಳು ಬಡಿದು ಗೆರಸಿ ಮುಚ್ಚಿದ ಹಾಗೆ.
೧೪೦೮ ದೌತಿ ಇಲ್ಲವೆಂದು ಸವತೀ ಸಂಗಡ ಜಗಳಾಡಿದಳು.
೧೪೦೯ ದ್ರವ್ಯವಿದ್ದವನಲ್ಲಿ ಹವ್ಯವಾದರೂ ಗವ್ಯಕ್ಕೆ ಮಾತ್ರ ಬಡತನ.
೧೪೧೦ ದ್ರವ್ಯವಿದ್ದವನು ತಿಂದು ಸಾಯಲಿಲ್ಲ, ಸಾಲಾ ಮಾಡಿದವ ತಿದ್ದಿ
೧೪೧೧ ದ್ರಾಕ್ಷಿ ಶೀ ಯೆಂದು ಬಳ್ಳಿ ಸಹ ತಿನ್ನ ಬಾರದು. [ಸಾಯಲಿಲ್ಲ.
೧೪೧೨ ಧಟ್ಟಿ ವ್ಯಾಪಾರಾ ಮಾಡಿ ಶೆಟ್ಟಿ ಕೆಟ್ಟು ಹೋದ.

೧೪೧೩ ಧಣಿ ಹೇಳ್ಯಾಟ, ಬಡಗಿ ಮಾಡಾಟ.

೧೪೧೪ ಧನವಿಲ್ಲದಿದ್ದರೂ ದನವಿದ್ದರೆ ಸಾಕು.

೧೪೧೫ ಧನಿಕರು ಯೆಂದು ಹನಿ ಬೀಳುವದು ತಪ್ಪೀತೇ.

೧೪೧೬ ಧರ್ಮಕ್ಕೆ ಕೊಟ್ಟದ್ದು ದಾನಕ್ಕೆ ಹೋಯಿತು.

೧೪೧೭ ಧರ್ಮಕ್ಕೆ ಕೊಟ್ಟ ಯೆಮ್ಮೆಯ ಹಲ್ಲು ಹಿಡಿದು ನೋಡಿದ.

೧೪೧೮ ಧರ್ಮಕ್ಕೆ ದಟ್ಟಿ ಕೊಟ್ಟರೆ ಹಿತ್ತಲಿಗೆ ಹೋಗಿ ಮೊಳ ಹಾಕಿ ನೋ[ಡಿದ.

೧೪೧೯ ಧರ್ಮಕ್ಕೆ ಹೋದರೆ ಕರ್ಮ ಬಂತು.

೧೪೨೦ ಧರ್ಮ ಮಾಡಿದರೂ ಮರ್ಮ ತಿಳಿಯ ಬೇಕು.

೧೪೨೧ ಧಾಟಿಯಿಂದ ಹೋಗಿ ಮೋಟನಾದ.

೧೪೨೨ ಧಾತು ಕುಂದಿದರೂ ಮಾತು ಕುಂದಲಿಲ್ಲ.

೧೪೨೩ ಧಾತು ತಿಳಿದರೆ ವಿಧಾತ್ರನಾದಾನೇ.

೧೪೨೪ ಧಾತು ತಿಳಿಯದವನು ವಿಧಾತ್ರಕ್ಕಿಂತ ಕಡೆ.

೧೪೨೫ ಧಾನ್ಯ ಧನವಾಗದೇ ಮಾನ್ಯ ಪೂಜ್ಯನಾಗನೇ.

೧೪೨೬ ಧಾನ್ಯ ಹೆಚ್ಚಿದರೆ ಚೋಮೆಗೆ ಯೇನು.

೧೪೨೭ ಧಾನ್ಯ ಹೆಚ್ಚಿದವಗೆ ಮಾನ್ಯ ಬರುವದು.

೧೪೨೮ ಧಾರಾಳಕ್ಕೋಸ್ಕರ ದಂಡಣೆಯಾದರೆ ಊರಾಳು ಯೇನು ಮಾ[ಡ್ಯಾರು.

೧೪೨೯ ಧಾರಾಳಿದ್ದವನ ಹತ್ತರ ಹೇರಾಳ ಕೇಳ ಬಹುದು.

೧೪೩೦ ಧಾರೇ ಯೆರದು ಕೊಟ್ಟ ಮೇಲೆ ಬೇರೆ ಮಾತು ಉಂಟೇ.

೧೪೩೧ ಧಿಗಿಲು ತಾಗದೆ ಮಗಳು ಬತ್ತಿದಳು.

೧೪೩೨ ಧೀರನಾದರೂ ನೀರು ಬಿಡನು.

೧೪೩೩ ಧೀರನಿಗ್ಯಾತಕೆ ಸಾರೀ ಯೋಚನೆ.

೧೪೩೪ ಧೂಪಾ ಹಾಕಿದರೆ ಪಾಪಾ ಹೋದೀತೇ.

೧೪೩೫ ಧೂಳಲ್ಲಿ ಬಿದ್ದವ ಮೂಳನಿಂದ ಕಡೆ.

೧೪೩೬ ಧೂಳಿ ಧೂಪವಾದೀತೇ, ಮೂಳಿಗೆ ಸ್ವರ್ಗವಾದೀತೇ.

೧೪೩೭ ಧೂಳಿಯಲ್ಲಿ ಬಿದ್ದರೆ ಚೇಳಿನ ಕಾಟ ತಪ್ಪೀತೇ.

೧೪೩೮ ಧೂಳಿಯಿಂದ ಮಾಳಿಗೆ ಆದೀತೇ.

೧೪೩೯ ಧೊರೆ ತನಕ ದೂರು, ಹೊಲೆ ತನಕ ವೋಟ.

೧೪೪೦ ಧೊರೆತನಕ್ಕೆ ಬಡತನವೇ.

೧೪೪೧ ಧೊರೆಯು ರಥವಾದರೂ ಯೆತ್ತೋ ಇಲ್ಲದೆ ತಿರುಗದು.

೧೪೪೨ ಧೊರೆಯಾದರೂ ನರೆ ತಪ್ಪೀತೇ.

೧೪೪೩ ಧೊರೆಯಾದರೂ ತೊರೆಗೆ ದೊಡ್ಡವನೇ.

೧೪೪೪ ಧೊರೆಯಿಂದ ಆಗುವಂತಾದ್ದು ನರಿಯಿಂದ ಆದೀತೇ.

೧೪೪೫ ಧೊರೆ ಹೇಳಿದನೆಂದರೆ ಮರದ ಕಾಯಿ ಬಿದ್ದೀತೇ.

೧೪೪೬ ಧ್ಯಾನವಿಲ್ಲದವ ಕಾನನಕ್ಕೆ ಹೋದರೇನು.

೧೪೪೭ ಧ್ಯಾನವಿಲ್ಲದಿದ್ದರೂ ಮೌನ ಬೇಕು.

೧೪೪೮ ಧ್ಯಾನ ಉಳ್ಳವನಿಗೆ ಜ್ಞಾನ.

೧೪೪೯ ಧ್ಯಾನಿಸಿ ಕೂತಾಗ್ಯೂ ಹಾನಿ ಬರುವದು ತಪ್ಪೀತೇ.

೧೪೫೦ ಧ್ಯಾನಿಸಿದವನೇ ಮಾನಿ.

೧೪೫೧ ಧ್ವಜದ ಗುರ್ತು ಗಜಕ್ಕೆ ತಿಳಿದೀತೇ.

೧೪೫೨ ಧ್ವನಿ ಮಾಡಿದರೆ ಹನಿ ಬಿಟ್ಟೀತೇ.

೧೪೫೩ ನಂಜಿಗೆ ಮದ್ದಿಲ್ಲ, ಬಂಜೆಗೆ ಮಕ್ಕಳಿಲ್ಲ.

೧೪೫೪ ನಂಜು ರೋಗದವನಿಗೆ ಗಂಜಿ ಸಲ್ಲದು.

೧೪೫೫ ನಂಟು ನೋಡದೆ ಹೋಯಿತು, ಸಾಲ ಕೇಳದೆ ಹೋಯಿತು.

೧೪೫೬ ನಂಟು ರತ್ನ ಯೆರಡೂ ಉಳೀ ಬೇಕು.

೧೪೫೭ ನಂದುರಾಯನ ಭಂಡಾರ ನಾಯಿ ನರಿ ತಿಂದು ಹೋಯಿತು.

೧೪೫೮ ನಂಬಿ ಅಂಬಿಗೆ ಬಿದ್ದ ಹಾಗೆ.

೧೪೫೯ ನಂಬಿದವನಿಗೆ ಇಂಬು, ನಂಬದವನಿಗೆ ಅಂಬು.

೧೪೬೦ ನಂಬೆಂದರೆ ಅಡವೀ ಮೃಗ ನಂಬುತ್ತದೆ.

೧೪೬೧ ನಕ್ಕರೂ ಠಕ್ಕರಿಗೆ ನಂಬ ಬಾರದು.

೧೪೬೨ ನಕ್ಕರೂ ನೆಕ್ಕೋದು ಬಿಡದು.

೧೪೬೩ ನಕ್ಕುನಕ್ಕು ಮಾತಾಡುವವ ಕೊಕ್ಕರೆಕ್ಕಿಂತ ಕಡೆ.

೧೪೬೪ ನಗದ ವ್ಯಾಪಾರ ತೊರೇ ನೀರಿನ ಹಾಗೆ.

೧೪೬೫ ನಗರದಲ್ಲಿದ್ದರೂ ನರಕ ಭಯ ತಪ್ಪೀತೇ.

೧೪೬೬ ನಗ್ನದವನ ನಾಚಿಕೆ ಭಗ್ನವಾಗುವದು.

೧೪೬೭ ನಟ್ಟ ಕಂಭದ ಹಾಗೆ ಧಿಟ್ಟವೀರನಿರ ಬೇಕು.

೧೪೬೮ ನಟ್ಟಡವಿಯಲ್ಲಿದ್ದು ಕಟ್ಟಿಗೆ ತರುವವರ್‍ಯಾರು ಅಂದ ಹಾಗೆ.

೧೪೬೯ ನಟ್ಟ ಮರಕ್ಕೆ ನೀರು ಯೆರದ ಹಾಗೆ.

೧೪೭೦ ನಡಕಟ್ಟು ಕಟ್ಟಿದರೆ ಮಡೂ ಹಾರಿ ಹೋಗ ಬಹುದೇ.

೧೪೭೧ ನಡಾ ಕಟ್ಟಿದವಗೆ ತಡವೇನು.

೧೪೭೨ ನಡುಗಿದರೆ ಗುಡುಗು ಕೇಳೀತೇ.

೧೪೭೩ ನಡುಗುವನ ಮೇಲೆ ಸತ್ತ ಹಾವು ಬಿದ್ದ ಹಾಗೆ.

೧೪೭೪ ನಡುಮನೆಯಲ್ಲಿ ಹೋಗಿ ಮಡುವಿನಲ್ಲಿ ಬಿದ್ದೆ ಯೆಂದು ಕೂಗಿದ.

೧೪೭೫ ನಡುಮನೇಲಿ ಹೇತು ನಾತ ಬರುತ್ತೆ ಯೆಂದ.

೧೪೭೬ ನಡುಮರಾ ಹತ್ತಿ ಬುಡಾ ಕಡಿದ.

೧೪೭೭ ನಡುರಾತ್ರೇಲಿ ನಡದರೆ ನಡಕ ತಪ್ಪೀತೇ.

೧೪೭೮ ನಡುಹೊಳೆಯಲ್ಲಿ ಕೈ ಬಿಟ್ಟ ಹಾಗೆ.

೧೪೭೯ ನಡೆಯ ಬಲ್ಲವನ ವೊಡವೆ ನುಡಿಯ ಬಲ್ಲವ ಕೊಂಡು ಹೋದ.

೧೪೮೦ ನಡೆಯಲಾಪರೆ ನಡತೆ, ಹೊರಲಾಪರೆ ಹೊರೆ.

೧೪೮೧ ನತ್ತಿಗೆ ಯೋಗ್ಯಳಾಗದವಳು ಮುತ್ತು ಬಯಸಿದ ಹಾಗೆ.

೧೪೮೨ ನತ್ತಿ ಮಾತಾಡುವವನ ಮಾತು ಸುತ್ತಿ ತೊಳಲಿದರೆ ಪಟ್ಟು ಆದೀತೇ.

೧೪೮೩ ನತ್ತು ಇಲ್ಲವೆಂದು ಸತ್ತು ಹುಟ್ಟುವೆನೆಂದರೆ ಮತ್ತೆ ಬಂದೀತೇ.

೧೪೮೪ ನದೀ ದಾಟ ಬೇಕಾದರೆ ಗುದಿಗೆಯಿಂದ ಆದೀತೇ.

೧೪೮೫ ನದೀ ದಾಟ ಬೇಕಾದರೆ ಬಿದಿಗೆಯೇ ಆಗ ಬೇಕೋ.
೧೪೮೬ ನದೀ ದಾಟಿ ಬದೀಲಿ ಬಿದ್ದ ಹಾಗೆ.
೧೪೮೭ ನನಗೂ ನಿನಗೂ ಜೋಡು, ವೊಪ್ಪಾನಕ್ಕಿ ಕೇಡು.
೧೪೮೮ ನನಗೂ ನಿನಗೂ ವಿಶ್ವಾಸ ಮೊನ ಕುಕ್ಕೇಲಿ ಕೈ ಹಾಕ ಬೇಡ.
೧೪೮೯ ನನಗೆ ಬಾರದ ಗಾದೆ ಇಲ್ಲ, ಕಾಗೆ ಕುಂದ್ರುದ ಮರವಿಲ್ಲ.
೧೪೯೦ ನನಗೆ ಬಾರದು, ಅಪ್ಪುಗೆ ತಿಳಿಯದು. ಚಿಕ್ಕಪ್ಪ ಬಲ್ಲ, ಊರಲಿಲ್ಲ.
೧೪೯೧ ನನ್ನ ಹಾಗೆ ಆಗು ಮಗಳೇ.
೧೪೯೨ ನಮಸ್ಕಾರ ಅಯ್ಯಾ ಯೆಂದರೆ ಚಮತ್ಕಾರ ಹೆಚ್ಚಿತು ಅಂದ.
೧೪೯೩ ನಮಸ್ಕಾರ ಇದ್ದಲ್ಲಿ ತಿರಸ್ಕಾರ ಇದ್ಧೀತು. [ದರೇನು.
೧೪೯೪ ನಮ್ಮ ತೋಟದಲ್ಲಿ ನಾವು ಕೈ ಹಾಗೆ ಬೀಸಿದರೇನು ಹೀಗೆ ಬೀಸಿ
೧೪೯೫ ನಮ್ಮ ದೇವರ ಸತ್ಯ ನಾವೇ ಬಲ್ಲೆವು.
೧೪೯೬ ನಮ್ಮ ಮಗ ಇಪ್ಪತ್ತು ಹೋಳಿಗೇ ತಿಂದಾನೆಂದರೆ ಹಾಕುವವ
೧೪೯೭ ನಮ್ಮ ಮಗನ ಗುಣಾ ನಾವರಿಯೆವೇ. [ರ್‍ಯಾರು.
೧೪೯೮ ನಮ್ಮ ಮನೆಗೆ ನಾವೇ ದಾಸರು ಬೆಕ್ಕಿಗಿಕ್ಕೋ ತಿರುನಾಮವ.
೧೪೯೯ ನಮ್ಮಷ್ಟಕ್ಕೆ ನಾವೇ ತುಕ್ಕಪ್ಪಯ್ಯನವರುಗಳು.
೧೫೦೦ ನಮ್ಮಿಂದ ಮೇಲು ಯಾರು ನಾವೇ ಮೇಲು.
೧೫೦೧ ನಯನ ಇಲ್ಲದವನು ಅಯನದ ಭೇದಾ ತಿಳಿದಾನೇ.
೧೫೦೨ ನಯ ಬಟ್ಟೆಯಾದರೆ ಸವೆಯದೆ ಇದ್ಧೀತೇ.
೧೫೦೩ ನಯವಾದ್ದಕ್ಕೆ ಕ್ರಯ ಹೆಚ್ಚು.
೧೫೦೪ ನಯವಿದ್ದಲ್ಲಿ ಭಯವಿಲ್ಲ.
೧೫೦೫ ನಯ ಶಾಲಿಯಾದವ ಜಯಶಾಲಿಯಾದಾನು.
೧೫೦೬ ನರಕ ಉಂಟೆಂದು ಅಳುಕಿದರೆ ತಪ್ಪೀತೇ.
೧೫೦೭ ನರಕಕ್ಕೆ ನವದ್ವಾರ, ನಾಕಕ್ಕೆ ವೊಂದೇ ದ್ವಾರ.
೧೫೦೮ ನರಕದ ದುಃಖ ನಾಕದವನಿಗೆ ತಿಳಿದೀತೇ.

೧೫೦೯ ನರಕದ ಬಾಗಲಿಗೆ ಸ್ವರ್ಗದ ಪಾಲಕನೋ.

೧೫೧೦ ನರಕದಲ್ಲಿ ಕರುಣವಿಲ್ಲ, ಸ್ವರ್ಗದಲ್ಲಿ ಮರಣವಿಲ್ಲ.

೧೫೧೧ ನರಕದಲ್ಲಿ ನಾರಾಯಣನೇ.

೧೫೧೨ ನರಕದಲ್ಲಿ ಬಿದ್ದರೂ ಬಯಕೆ ತಪ್ಪದು.

೧೫೧೩ ನರಕದಲ್ಲಿ ಬಿದ್ದವಗೆ ಹರಕು ಬಟ್ಟೆಯಾದರೇನು.

೧೫೧೪ ನರಕದಲ್ಲಿ ಬೀಳುವವನು ಹರಿಕೆ ಹೇಳಿದರೆ ತಪ್ಪೀತೇ.

೧೫೧೫ ನರಕದಲ್ಲಿ ಭೇದವಿಲ್ಲ, ಸ್ವರ್ಗದಲ್ಲಿ ರೋಗವಿಲ್ಲ.

೧೫೧೬ ನರಕದ ಸ್ವರೂಪ ನಾಯಿ ಬಲ್ಲದು.

೧೫೧೭ ನರಟುಗಾರನು ಪೊರಟಾಡುತ್ತಾನೆ.

೧೫೧೮ ನರಡನಿಗೆ ಕೊರಡ, ಕುರುಡನಿಗೆ ಕೋಲು.

೧೫೧೯ ನರಡ ಮನುಷ್ಯ ಕೊರಡಿಗೆ ಸಮಾನ.

೧೫೨೦ ನರಳಿದರೂ ಮರುಳು ಹೋಗದು.

೧೫೨೧ ನರಳಿದರೆ ಸಿಕ್ಕೀತೇ ಅರಳು.

೧೫೨೨ ನರಹತ್ಯಕ್ಕೆ ಹೆದರದವ ಕುರೀ ಹತ್ಯಕ್ಕೆ ಹೆದರ್ಯಾನೇ.

೧೫೨೩ ನರಿ ಮುಣುಗುವಾಗ್ಯೆ ಲೋಕವೇ ಮುಣುಗಿತು.

೧೫೨೪ ನರಿ ಹುರಿಯಾದರೆ ಕರಿಯಾದೀತೇ.

೧೫೨೫ ನರೀ ಕಂಡರೆ ಕೊಟ್ಟೀತೇ ಉಪ್ಪು ಖಂಡುಗವ.

೧೫೨೬ ನರೀ ಕಥೆಯ ಮುಂದೆ ಹರಿ ಕಥೆಯೇ.

೧೫೨೭ ನರೀ ಕೂಗು ನಾಗಲೋಕಕ್ಕೆ ಮುಟ್ಟೀತೇ.

೧೫೨೮ ನರೀ ಕೊಂದರೆ ಬರೀ ಹೇಲು.

೧೫೨೯ ನರೀ ಕೊಂಬಿದ್ದರೂ ನರರಿಗೆ ಹೆದರ ಬೇಕು.

೧೫೩೦ ನರೀ ಕೊಂಬಿದ್ದರೂ ಹುರಿಯೋದು ತಪ್ಪೀತೇ.

೧೫೩೧ ನರೀ ಯತ್ನ ಮರಿಯ ತಕ್ಕದ್ದಲ್ಲ.

೧೫೩೨ ನರಗುಂದಕ್ಕೆ ಹೋದರೆ ಕುರು ತಪ್ಪೀತೇ.

೧೫೩೩ ನರೆ ಬಂತು ಯೆಂದು ಕೆರೇಳಿ ಹಾರಿದರೆ ಕಪ್ಪಾದೀತೇ.
೧೫೩೪ ನರೆ ಬಂದರೆ ಮರೇ ಮಾಡಿದರೆ ಹೋದೀತೇ.
೧೫೩೫ ನರೆ ಬಂದವ ಹೊರೆ ಹೊತ್ತಾನೇ.
೧೫೩೬ ನರ್ತನವು ಕೀರ್ತನೆಗೆ ಸಮಾನಾಗ ಬೇಕು.
೧೫೩೭ ನರ್ಮದೆಗೆ ಹೋದರೆ ಕರ್ಮ ತಪ್ಪೀತೇ.
೧೫೩೮ ನಲ್ಲ ಮಲ್ಲಸಾದರೂ ಚಲ್ಲೋದು ತಪ್ಪದು.
೧೫೩೯ ನವಗ್ರಹ ಕಾಡುವಾಗ್ಯೆ ಸ್ವಂತ ಗೃಹ ಯೇನು ಮಾಡುತ್ತದೆ.
೧೫೪೦ ನವದರೂ ಭವ ತಪ್ಪದು.
೧೫೪೧ ನವದರೆ ಜವ ಬಿಟ್ಟಾನೇ.
೧೫೪೨ ನವದವನಿಗೆ ನೋವು ತಪ್ಪದು. [ಮಾಡ್ತ್ಯಾರು.
೧೫೪೩ ನವದ್ವಾರದಿಂದ ಹೋಗುವಾಗ್ಯೆ ನಗರದ್ವಾರದವರು ಯೇನು
೧೫೪೪ ನವಧಾನ್ಯ ಬೆಳದವನಿಗೆ ವ್ಯವಧಾನವಿಲ್ಲ.
೧೫೪೫ ನವಮಾಸ ತುಂಬಿದ ಮೇಲೆ ನವರಾತ್ರಿ ಆಗಲಿ ಅಂದರೆ ನಿತ್ತೀತೆ.
೧೫೪೬ ನವರತ್ನವಾದರೂ ಕನಕಕ್ಕೆ ಅಪೇಕ್ಷಿಸುತ್ತದೆ.
೧೫೪೭ ನವರತ್ನವಿದ್ದರೂ ನರರತ್ನ ಬೇಕು.
೧೫೪೮ ನವರಾತ್ರೇ ಮಧ್ಯ ಶಿವರಾತ್ರೆ ಬಂದೀತೇ.
೧೫೪೯ ನವಿಲು ಆಡಿದರೆ ಕೆಂಬೋತ ಪುಕ್ಕ ತೆರ ಕೊಂಡಿತು.
೧೫೫೦ ನವಿಲು ಕುಣಿಯೋದು ನೋಡಿ ಕುಕ್ಕುಟ ಕುಣೀತು.
೧೫೫೧ ನಶೆನಶೆ ಉಳ್ಳವನು ಹಶಿಯುನೇ.
೧೫೫೨ ನಷ್ಟಕಾಲದ ದೃಲ್ಲಿಷ್ಟಿ ಇದ್ದೇನು.
೧೫೫೩ ನಷ್ಟ ಬಿದ್ದರೂ ಭ್ರಷ್ಟನಾಗ ಬಾರದು.
೧೫೫೪ ನಷ್ಟ ಬಿದ್ದವ ಪುಷ್ಟಿಯಾದಾನೇ.
೧೫೫೫ ನಷ್ಟವಾದವನಿಗೆ ಕಷ್ಟ ತಪ್ಪೀತೇ.
೧೫೫೬ ನಸದ ಬೆಂಣೆಯ ಗಶಿಯು ಹಾಗೆ.

೧೫೫೭ ನಸೀ ಭ್ರಮೆ ಇದ್ದವ ಮಶಿ ಆದರೂ ಹಾಕಿ ಕೊಂಡಾನು.

೧೫೫೮ ನಸುನಗೆ ಇಲ್ಲದವನ ಮೋರೆ ಬುಸುಬುಸ ಯೆಂಬುವದು.

೧೫೫೯ ನಸೆ ಇದ್ದ ಹಲಿಗೆ ಸಿಕ್ಕಿದರೆ ಹಸೆ ಯಾಕೆ.

೧೫೬೦ ನಹಿ ನಹೀ ಯೆಂಬವ ಮಹಿಗೆ ಹೊರೆ.

೧೫೬೧ ನಹುಷನಾದರೂ ನಾಕದಿಂದ ಬಿದ್ದನು.

೧೫೬೨ ನಹುಷನಿಗೂ ನೋವು ತಪ್ಪಲಿಲ್ಲ.

೧೫೬೩ ನಹುಷರಾಯನ ಘೋಷ ನಾಕದಲ್ಲಿ ಹೋಯಿತು.

೧೫೬೪ ನಳಚಕ್ರವರ್ತಿಯಾದರೂ ಅಳಿವು ತಪ್ಪಲಿಲ್ಲ. [ಳಗಳಿಲ್ಲ.

೧೫೬೫ ನಳಿನಕ್ಕಿಂತ ಶ್ರೇಷ್ಟ ಪುಷ್ಪವಿಲ್ಲ, ಅಳಿಗಳಿಕ್ಕಿಂತ ಮೇಲು ಹು

೧೫೬೬ ನಳಿನವಿಲ್ಲದ ಕೊಳವೂ ಅಳಿಗಳಿಲ್ಲದ ಹೂವೂ ಸಮ.

೧೫೬೭ ನಲ್ಲೀರಾಗಕ್ಕೆ ನರಿ ತಲೆ ತೂಗಿದ ಹಾಗೆ.

೧೫೬೮ ನಕ್ಷತ್ರವಾದರೂ ಸುಕ್ಷೇತ್ರದಲ್ಲಿರ ಬೇಕು.

೧೫೬೯ ನಕ್ಷತ್ರವು ಸ್ವಕ್ಷೇತ್ರದಲ್ಲಿರ ಬೇಕು.

೧೫೭೦ ನಕ್ಷತ್ರಾ ತಿಳಿದವನ ಸಾವು ಕ್ಷಣ ಹೊತ್ತು ಆದರೂ ನಿತ್ತೀತೇ.

೧೫೭೧ ನಕ್ಷತ್ರಾ ತಿಳಿದವ ಪಕ್ಷಾ ತಿಳಿಯಲಾರನೇ.

೧೫೭೨ ನಕ್ಷತ್ರಾ ತಿಳಿಯದಿದ್ದರೂ ಭಕ್ಷಣೆಯಲ್ಲಿ ಕಡಿಮೆ ಇಲ್ಲ.

೧೫೭೩ ನಾಂದಿಗೆ ಕೂಡಿದ ಮಂದಿ ಪ್ರಸ್ತಕ್ಕೆ ಕೂಡೀತೇ.

೧೫೭೪ ನಾಂದೀ ಕಾಲದಲ್ಲಿ ಮೂಂದಿ ಇರ ಬಾರದು.

೧೫೭೫ ನಾಕದವರಿಗೆ ಲೋಕದ ಭಯವೇನು.

೧೫೭೬ ನಾಕದ ಸಂತೋಷ ಸೂಕರಗೆ ತಿಳಿದೀತೇ.

೧೫೭೭ ನಾಕದ ಸುಖ ನಾಯಿಗೆ ತಿಳಿದೀತೇ.

೧೫೭೮ ನಾಗಮಲ್ಲಿಗೆ ಹೂ ಪೂಗವಾದೀತೇ.

೧೫೭೯ ನಾಗರ ಪಂಚಮಿಯಾದರೆ ಹಾದರಗಿತ್ತಿಗೆ ಯೇನು.

೧೫೮೦ ನಾಗರ ಹಾವಿನ ತಲೇ ಮೇಲೆ ಮಾಣಿಕ ಇದ್ದ ಹಾಗೆ.

೧೫೮೧ ನಾಗರ ಹಾವು ಅಂದಾ ಕ್ಷಣ ವಿಷತಾಗಿ ಸಾಯುವನೇ.
೧೫೮೨ ನಾಗರಿಕನ ಮಾನ ನಾಡಿನಲ್ಲಿ ಹೋಯಿತು.
೧೫೮೩ ನಾಗರಿಕರ ಮಾತು ನಗರದಲ್ಲಿ ಚಂದ.
೧೫೮೪ ನಾಗಮೀಕ ಪುರುಷಗೆ ಭೋಗವಿಲ್ಲದೆ ಹೋದೀತೇ.
೧೫೮೫ ನಾಗ ಲೋಕದ ಹತ್ತರ ನಾಕ ಲೋಕವೋ.
೧೫೮೬ ನಾಗವಲ್ಲೀ ಯೆಲೆಯಾದರೂ ಪೂಗಿ ಫಲವಿಲ್ಲದೆ ಸಲ್ಲದು.
೧೫೮೭ ನಾಗವಾಸ ಇದ್ದವರು ನಾಗಲೋಕಕ್ಕೆ ಹೋದಾರೇ.
೧೫೮೮ ನಾಗಸಂಪಿಗೇ ಮುಡಿಯ ಬೇಕಾದರೆ ನಾರು ಯಾಕೆ.
೧೫೮೯ ನಾಗಸರಾ ಊದಿದರೆ ನಾಯಿ ಆಡೀತೇ.
೧೫೯೦ ನಾಗಾಲಿನ ಮೃಗವಾದರೆ ನಾಕಕ್ಕೆ ಹೋದೀತೇ.
೧೫೯೧ ನಾಚಿಕೆ ಇಲ್ಲದವರ ಕಂಡರೆ ಆಚೆಗೆ ಹೋಗ ಬೇಕು.
೧೫೯೨ ನಾಟಕ ಧಾರಿಯು ಕಾಟಕಾ ಮಾಡ ಬಾರದು.
೧೫೯೩ ನಾಟಿರಾಗವಾದರೂ ಪಾಠವಿಲ್ಲದೆ ಬಾರದು.
೧೫೯೪ ನಾಟುವಂಟುಗಳು ನಾಲ್ಕೆಂಟು ದಿವಸದಲ್ಲೆ ನೆಲೆಗೊಂಬುವವು.
೧೫೯೫ ನಾಟ್ಯದಲ್ಲಿ ಶ್ರೇಷ್ಟನಾದರೆ ಆಟದಲ್ಲೇ ಆದೀತು.
೧೫೯೬ ನಾಟ್ಯರಂಗಕ್ಕೆ ಹೋಗಿ ಊಟಾ ಅಪೇಕ್ಷಿಸಿದ ಹಾಗೆ.
೧೫೯೭ ನಾಡಿ ಆಡಿದವ ಓಡಿ ಬಂದಾನೇ.
೧೫೯೮ ನಾಡಿಗಿಬ್ಬರು ಅರಸರಾದರೆ ಕೇಡು ಬಪ್ಪುದು ತಪ್ಪದು.
೧೫೯೯ ನಾಡಿನ ಭೂತ ಪೀಡಿಸದೇ ನಿತ್ತೀತೇ.
೧೬೦೦ ನಾಡಿನಲ್ಲಿ ಇದ್ದರೂ ಆಡಿನ ಭಯ ತಪ್ಪಲಿಲ್ಲ.
೧೬೦೧ ನಾಡಿ ನಿತ್ತ ಮೇಲೆ ಕಾಡು ಪಾಲು.
೧೬೦೨ ನಾಡೀ ನೋಡದೆ ಮದ್ದು ಕೊಟ್ಟರೆ ಕಾಡು ರೋಗ ಬರುವದು.
೧೬೦೩ ನಾಡೀ ಪರೀಕ್ಷೆ ಆಡು ಬಲ್ಲದೇ.
೧೬೦೪ ನಾಡು ಓಡುವಾಗ ಮೋಡಿಗಾರ ಬಂದ.

೧೬೦೫ ನಾಡು ಕೂಡಿದರೆ ನಗರಕ್ಕೆ ಕೇಡು.

೧೬೦೬ ನಾಡುಗಳೆಲ್ಲ ವೋಡುವಾಗ ಮೂಡೇ ಅಪೇಕ್ಷಿಸಿದ.

೧೬೦೭ ನಾಡುಗಳೆಲ್ಲ ನಾಡಿಯಾದರೆ ನಗರಕ್ಕೆ ಗೂಢ.

೧೬೦೮ ನಾಣ್ಯ ಇದ್ದವ ನಾಯಕನು.

೧೬೦೯ ನಾಣ್ಯ ಇಲ್ಲದವ ನೊಣಕ್ಕಿಂತ ಕಡೆ.

೧೬೧೦ ನಾಣ್ಯದ ಲಕ್ಷಣ ವಾಣಿಜಗೆ ತಿಳಿಯದೇ.

೧೬೧೧ ನಾತವಾಗಲಿ ಪರಿಮಳವಾಗಲಿ ವಾತಕ್ಕೆ ಭೇದವಿಲ್ಲ.

೧೬೧೨ ನಾಥನಾಗ ಬೇಕೆಂದು ಸ್ವಾರ್ಥ ಮಾಡಿದರೆ ವ್ಯರ್ಥವೇ ಸರಿ.

೧೬೧೩ ನಾಥನಾದರೂ ಭೂತ ಬಿಡದು.

೧೬೧೪ ನಾಥನಾದರೂ ವಾತ ಬಿಡದು.

೧೬೧೫ ನಾದವಿದ್ದರೆ ಘಂಟಿ, ವಾದವಿದ್ದರೆ ತಂಟಿ.

೧೬೧೬ ನಾದವಿಲ್ಲದವನು ವೋದಿದರೂ ಬಾರದು.

೧೬೧೭ ನಾದಿದ ಹಿಟ್ಟಿಗೆ ಸ್ವಾದ ಹೋದೀತೇ.

೧೬೧೮ ನಾದಿನಿಯಾದರೆ ಹಾದಿಲಿ ಬಿದ್ದಾಳೇ.

೧೬೧೯ ನಾನಾರಾಯನ ಹತ್ತಿರ ಹೋಗಿ ನಾಲ್ಕು ಕಾಸು ಬೇಡಿದ.

೧೬೨೦ ನಾನು ನೀನು ಅಂದಾಕ್ಷಣ ಹಾನಿ ಯೇನು.

೧೬೨೧ ನಾನು ಹಿಡಿದ ಮೊಲಕ್ಕೆ ಮೂರೇ ಕಾಲು.

೧೬೨೨ ನಾನು ಹುಲಿಯಾದರೆ ನನ್ನ ಅಣ್ಣ ಹೆಬ್ಬುಲಿ.

೧೬೨೩ ನಾನೂ ನಾಗಪ್ಪನೂ ಕೂಡಿ ಕಟ್ಟಿದ್ದು ಯೆಂದು ವೋತಿ ಹೇಳಿದಂತೆ.

೧೬೨೪ ನಾನೇ ವೊಲ್ಲೆ ಯಂದರೆ ನಮ್ಮಪ್ಪ ಯಾರಿಗೆ ಮದಿವೆ ಮಾಡ್ಯಾನು.

೧೬೨೫ ನಾನೊಂದು ಬಗೆಯೆ ದೇವರೊಂದು ಬಗದನು.

೧೬೨೬ ನಾಪಿಕ ಅಂದಾಕ್ಷಣ ಪಾಪ ಬಂದೀತೇ.

೧೬೨೭ ನಾಭಿ ಪರಿಯಂತರ ಉಟ್ಟಾಕ್ಷಣ ಲೋಭತ್ವ ಹೋದೀತೇ.

೧೬೨೮ ನಾಮಕರಣ ಇದ್ದಲ್ಲಿ ಹೋಮಕರಣ.

೧೬೨೯ ನಾಮವಿದ್ದವಗೆ ಕಾಮ ಕಡಿಮೆಯೇ.
೧೬೩೦ ನಾಮವಿದ್ದವ ಗ್ರಾಮದವರಿಗೆ ಬೇಕು.
೧೬೩೧ ನಾಮವಿದ್ದಾಗ್ಯೂ ನಂಬಿಗೆ ಇರ ಬೇಕು.
೧೬೩೨ ನಾಮವಿಲ್ಲದ ಅರಸನಿಗೆ ನೇಮವಿಲ್ಲದ ಪ್ರಧಾನಿ.
೧೬೩೩ ನಾಮ ಉಳ್ಳವ ನಾಕ ಪಡೆಯನೇ.
೧೬೩೪ ನಾಮ ಹಾಕಿದವನಾದರೆ ಹೋಮಾ ಮಾಡ್ಯಾನೇ.
೧೬೩೫ ನಾಯಕನಿಲ್ಲದ ಊರಲ್ಲಿ ಕಾಯಕ ಸಿಕ್ಕೀತೇ.
೧೬೩೬ ನಾಯಿ ಕೂಗಿದರೆ ದೇವಲೋಕ ಹಾಳಾದೀತೇ.
೧೬೩೭ ನಾಯಿಗೆ ಕೆಲಸವಿಲ್ಲ, ಕುಂದ್ರಲಿಕ್ಕೆ ಸಮಯವಿಲ್ಲ.
೧೬೩೮ ನಾಯಿಗೆ ನರೆ ಬಂದರೆ ಅಜ್ಜಿ ಅನ್ನಿಸಿ ಕೊಂಡೀತೇ.
೧೬೩೯ ನಾಯಿಗೆ ನಾರಂಗದ ಉಪ್ಪಿನಕಾಯೇ.
೧೬೪೦ ನಾಯಿ ತಿಂದ ಖಜ್ಜಾಯದ ಹಾಗೆ.
೧೬೪೧ ನಾಯಿ ಬಡೀಲಿಕ್ಕೆ ಬಣ್ಣದ ಕೋಲೇ.
೧೭೪೨ ನಾಯಿ ಬಲ್ಲದು ತೊಗಲು ಬಲ್ಲದು.
೧೬೪೩ ನಾಯಿ ಬಲ್ಲದೆ ದೇವರ ಜಗಲಿಯ.
೧೬೪೪ ನಾಯಿ ಬೊಗಳಿ ಪಾಳ್ಯಕ್ಕೆ ಕೇಡು ತಂತು.
೧೬೪೫ ನಾಯಿಯ ಬಾಲಾ ನಳಿಗೆಲಿ ಹಾಕಿದರೆ ಡೊಂಕು ಬಿಟ್ಟೀತೇ.
೧೬೪೬ ನಾಯಿಯ ಬೋಜ್ಜಕ್ಕೆ ಅಮೇಧ್ಯದ ಹೋಳಿಗೆ.
೧೬೪೭ ನಾಯಿ ಯೆತ್ತ, ನಾಗ ಲೋಕವೆತ್ತ.
೧೬೪೮ ನಾಯಿ ಸಾಯೋ ವರೆಗೆ ಕಾಲು ಕೊಳ್ಳೇದೇ.
೧೬೪೯ ನಾಯಿ ಹುಣ್ಣಿಗೆ ಬೂದಿಯೇ ಮದ್ದು.
೧೬೫೦ ನಾಯಿಯಾ ತಲೇ ಮೇಲಣಬುತ್ತಿಯ ಹಾಗೆ.
೧೬೫೧ ನಾರಿಯಾಗಿ ಸಮ ನಡಿಯದಿದ್ದವಳೇ ಮಾರಿ.
೧೬೫೨ ನಾರಿ ಇಲ್ಲದ ಮನೆ ನೀರು ಇಲ್ಲದ ಊರು ನೂರು ಬಂದರೂ ತಾ [ರಕ್ಕೆ ಬೇಡ.

೧೬೫೩ ನಾರೀ ಮೋರೆ ನೋಡಿ ಊರಿ ಕೂತರೆ ನೀರು ಸಿಕ್ಕೀತೇ.
೧೬೫೪ ನಾರು ಉಟ್ಟ್ಯಾಕ್ಷಣ ನಾರದವನಾದಾನೇ.
೧೬೫೫ ನಾರು ಕಟ್ಟಿದರೆ ನಾರೋದು ಬಿಟ್ಟೀತೇ.
೧೬೫೬ ನಾಲಿಗೆ ಇಲ್ಲದವನು ನಾರಾಯಣ ಅಂದಾನೇ.
೧೬೫೭ ನಾಲಿಗೆ ಇಲ್ಲದಿದ್ದರೆ ಕಾಲಿಗೆ ಬಟತನವೇ.
೧೬೫೮ ನಾಲಿಗೆ ವಾಸಿ ಇದ್ದವನ ಮಾತು ಹಾಲಿಗಿಂತ ಹೆಚ್ಚು.
೧೬೫೯ ನಾಲೆ ಇಲ್ಲದ ಊರೂ ಮಾಲೆ ಇಲ್ಲದ ಪ್ರಸ್ತವೂ ವೊಂದೇ.
೧೬೬೦ ನಾಲ್ವತ್ತರ ಮೇಲೆ ನಡಿಕೆ, ಯೆಂಭತ್ತರ ಮೇಲೆ ಬಡಿಕೆ.
೧೬೬೧ ನಾವೆ ದಾಟಿಸುವದಕ್ಕೆ ನಾಳವಾದೀತೇ.
೧೬೬೨ ನಾಶ ಮಾಡುವವನು ದಾಸನಾದರೆ ಲೇಸು ಮಾಡ್ಯಾನೇ.
೧೬೬೩ ನಾಶವಾಗೋ ವರೆಗೆ ಆಶೆ ಬಿಡದು.
೧೬೬೪ ನಾಸ್ತಿಕನ ಮನಸ್ಸು ಸ್ವಸ್ಥವಿದ್ಧೀತೇ.
೧೬೬೫ ನಾಳೆ ನಾಳೆ ಯೆಂದು ನಾಳು ಹೋಗಿ ಹೊಳ್ಳೆವಿ ಬಂದದ್ದು ಕೊ[ಳ್ಳೀವಿ ಹೋದೀತೇ.
೧೬೬೬ ನಾಳೆ ನಾಳೆ ಯೆಂದು ಸುಳ್ಳು ಹೇಳಿ ಹೋಳಿಗೆ ತಪ್ಪಿಸಿದಿ.
೧೬೬೭ ನಾಳೆ ಮಾಳೆ ಹಬ್ಬ ಹೋಳಿಗೆ ಬೇಕಾದಷ್ಟು.
೧೬೬೮ ನಾಳೆ ಯೆಂಬುದು ಗಣಪತೀ ಮದುವೇ ಹಾಗೆ.
೧೬೬೯ ನಾಳೆ ಸಾಲೆಗೆ ಹೋದರೆ ಕಬ್ಬು ತಿಂಬೋದು ಯಾರು.
೧೬೭೦ ನಿಂದನೆ ಮಾಡುವವನಿಗೆ ವಂದನೆ ಇಲ್ಲ.
೧೬೭೧ ನಿಂಬೇ ಹಣ್ಣಾದರೆ ಹಂಬಲಿಸಿದರೆ ಬಂದೀತೇ.
೧೬೭೨ ನಿಗದಿ ಇದ್ದವನಿಗೆ ಪಗದಿ ಇದ್ಧೀತು.
೧೬೭೩ ನಿಜನಾಗಿ ಸಾಯುವವನ ಹಾಗೆ ಮನೆ ತುಂಬ ಹೇತ.
೧೬೭೪ ನಿಜವಾಡಿದರೆ ನಿಷ್ಟುರ.
೧೬೭೫ ನಿತ್ಯದರಿದ್ರನಿಗೆ ಚಿಂತೆ ಯೇನು.
೧೬೭೬ ನಿತ್ಯದರಿದ್ರನಿಗೆ ನಿಶ್ಚಿಂತೆ.

೧೬೭೭ ನಿತ್ಯಪಯಣ ಬುತ್ತೀ ಕೇಡು.
೧೬೭೮ ನಿತ್ಯಮುಂಡೇ ಪಟ್ಣದಲ್ಲಿ ಯೆಚ್ಚರಿದ್ದವನೇ ಜಾಣ.
೧೬೭೯ ನಿತ್ಯಾ ಸಾಯುವವರಿಗೆ ಅಳುವವರ್ಯಾರು.
೧೬೮೦ ನಿದ್ದೆಗೆಟ್ಟನೋ ಬುದ್ಧಿಗೆಟ್ಟನೋ.
೧೬೮೧ ನಿದ್ದೆ ಮಾಡಿದರೆ ಯೇನು ವೊದ್ದೆ ಬಟ್ಟೆ ಕೊಡ ಬಾರದೇ.
೧೬೮೨ ನಿದ್ದೆ ಮಾಡಿದವನ ಕಾಲು ವೊತ್ತಿದ ಹಾಗೆ.
೧೬೮೩ ನಿಧಾನವಿದ್ದವನು ಸ್ವಾಧೀನ ತಪ್ಪ್ಯನೇ.
೧೬೮೪ ನಿಧಿ ಇದ್ದರೂ ನಿಧಾನವಿರ ಬೇಕು.
೧೬೮೫ ನಿನ್ನ ಅಧಿಕಾರ ಹೋದರೆ ನನ್ನ ಅಧಿಕಾರ ಹೋಯಿತೋ.
೧೬೮೬ ನಿನ್ನ ಸಾಲಕ್ಕೆ ನನ್ನ ಹಲಸಿನ ಹಣ್ಣು.
೧೬೮೭ ನಿನ್ನ ಹೊರೆಗೆ ನನ್ನ ಮೆಟ್ಟೇ.
೧೬೮೮ ನಿನ್ನಿಂದ ಯೆತ್ತು ಮಾರಿತು, ನನ್ನಿಂದ ವೊಂಟೆ ಮಾರಿತು.
೧೬೮೯ ನಿನ್ನೆ ಉಂಡದ್ದು ಇಂದು ಬಯಸೋದ್ಯಾಕೆ.
೧೬೯೦ ನಿಪುಣನಾದವನು ಕೃಪಣನಾಗ ಬಾರದು.
೧೬೯೧ ನಿಮಾಜು ಮಾಡಲಿಕ್ಕೆ ಹೋದಾಗ್ಯೆ ಮಸೂದಿ ಮುರಿದು ಬಿತ್ತು.
೧೬೯೨ ನಿಮಿಷ ತಡದರೆ ಅನಿಮಿಷನಾದಾನೇ.
೧೬೯೩ ನಿಮ್ಮ ಚಿತ್ತ ದುಡೀ ಬೇಕಾದರೆ ನಮ್ಮ ಸತ್ತ ಯೆಮ್ಮೆ ಬರ ಬೇಕು.
೧೬೯೪ ನಿಮ್ಮನೆ ಕಾಟಕ್ಕೆ ನಮ್ಮನೆ ಬಟ್ಟೆಯೇ.
೧೬೯೫ ನಿಮ್ಮನೆ ಯೆಮ್ಮೆ ಇದ್ದರೆ ನಮ್ಮನೆ ಕೊಮ್ಮೆ ಇದೆ.
೧೬೯೬ ನಿಮ್ಮನೆ ಯೆಮ್ಮೆ ನಮ್ಮನೆ ಕರು ತಾ ತಿಮ್ಮಕ್ಕಾ ಪಂಚ್ಛೇರು ತುಪ್ಪ.
೧೬೯೭ ನಿಮ್ಮಲ್ಲಿ ಯೆಷ್ಟು ರೊಕ್ಕ ಉಂಟೋ ನಮ್ಮಲ್ಲಿ ಅಷ್ಟು ಲೆಕ್ಕ ಉಂಟು.
೧೬೯೮ ನಿಯತ ಇದ್ದವನಲ್ಲಿ ನ್ಯಾಯ ಚಂದ.
೧೬೯೯ ನಿಯಮ ಉಳ್ಳವನ್ನ ಕಂಡರೆ ಯಮನಿಗೂ ಭಯ.
೧೭೦೦ ನಿಯಸಲಾರದ ಸೊಸೆಗೆ ಪಾಯಸವೇ ಕಹಿ.

೧೭೦೧ ನಿರಂತರ ಬರುವವ ಪರ್ಯಂತರ ಬಾರನೇ.

೧೭೦೨ ನಿರರ್ಥಕವಾದ ಕೆಲಸಕ್ಕೆ ಸ್ವಾರ್ಥ ಪಡೋದ್ಯಾಕೆ. [ದೀತು.

೧೭೦೩ ನಿರಾಕಾರವಾದ್ದು ಪ್ರತ್ಯಕ್ಷವಾದರೆ ಆಕಾರವಾದ್ದು ಕಾಣದೆ ಹೋ

೧೭೦೪ ನಿರಾಶೆ ಉಳ್ಳವನಲ್ಲಿ ಆಶೆ ಮಾಡಿದರೆ ಭೋಪ ಹೋಗದೇ.

೧೭೦೫ ನಿರೂಪ ಇದ್ದರೆ ಸ್ವರೂಪ.

೧೭೦೬ ನಿರ್ಬಂಧ ಮಾಡಿಗವನ ಸ್ವಬಂಧ ಹೋದೀತೇ.

೧೭೦೭ ನಿಲ ಇಲ್ಲದೆ ಹಲದಿಂದ ಹೊಲದ ಉಕ್ಕೆ ನಿಲ ನೋಡಿ ಸಂಸಾರ.

೧೭೦೮ ನಿಲ ಕಡೆ ಇಲ್ಲದವನಲ್ಲಿ ಊಟಕ್ಕೆ ಹೋಗಿ ಇದ್ದ ಹಲ್ಲು ಉದು
ರಿಸಿ ಕೊಂಡ.

೧೭೦೯ ನಿಲಬಾಕಿ ಕೇಳಲಿಕ್ಕೆ ಹೋಗಿ ಗೊಲ್ಲಮಿಂಡನಿಂದ ಪೆಟ್ಟು ತಿಂದ.

೧೭೧೦ ನಿಲುಕಿದರೆ ಸಿಕ್ಕದೆ ಇದ್ದದ್ದು ಕೂತರೆ ಸಿಕ್ಕೀತೇ.

೧೭೧೧ ನಿಲ್ಲದಿರುವ ಮಲ್ಲನ ಸಂಗಡ ಕಲ್ಲು ಹೊತ್ತೀಯಾ ಅಂದ ಹಾಗೆ.

೧೭೧೨ ನಿಲ್ಲಲಾರದ ಗುಲ್ಲು ಮಾಡಿ ಕೊಲ್ಲಿಸಿ ಕೊಂಡ.

೧೭೧೩ ನಿಲ್ಲು ಯೆಂದರೆ ಹಲ್ಲುಕಿಸಿದು ಗುಲ್ಲು ಮಾಡಿದ. [ಡ್ಯಾನು.

೧೭೧೪ ನಿವಾಳಿಗೆ ತಂದ ಬಟ್ಟೆ ಕಚ್ಚೆಗೆ ಆದರೆ ದಿವಾಳಿಗೆ ಯೇನು ಮಾ

೧೭೧೫ ನಿವಾಳಿ ಮಾಡೋಕ್ಕೆ ಹೋಗಿ ದಿವಾಳಿಯಾದ.

೧೭೧೬ ನಿಶ್ಚಯಕ್ಕೆ ಪಕ್ಷಪಾತವೇ.

೧೭೧೭ ನಿಷ್ಠೆ ಇದ್ದವನಿಗೆ ನಷ್ಟವಿಲ್ಲ.

೧೭೧೮ ನಿಸಿದ್ಧವಾದ ವಸ್ತು ಅಶುದ್ಧವೆಂದರೆ ಕಸೂತಿ ಹಾಕಿದ್ದು ಯಾಕೆ.

೧೭೧೯ ನಿಸ್ತುಕನಾದವನು ಮಸ್ತಕವನ್ನು ಯೆತ್ತಲಾರ.

೧೭೨೦ ನೀ ಕಪಟಿಯಾದರೆ ನಿನಗೆಲ್ಲರೂ ಕಪಟಿಗಳೆ.

೧೭೨೧ ನೀಗಿದರೂ ಬಡತನ ಬಿಡದು.

೧೭೨೨ ನೀಗುವವನಿಗೆ ಭಾಗ ಸಿಕ್ಕಿದರೂ ಭೋಗಕ್ಕೆ ಬಾರದು.

೧೭೨೩ ನೀಚನ ಸಂಗವೂ ಈಚಲ ನೀರೂ ನಾಚಿಗೆ ಕೆಡಿಸುವದು.

೧೭೨೪ ನೀಚರ ಸಭೆಗೆ ಹೋದರೆ ಸಾಚಿಕೆ ಗೇಡಾಗುವದು.
೧೭೨೫ ನೀಟಾಗಿ ನಡದರೆ ಕಾಟ ಬಾರದು.
೧೭೨೬ ನೀಡದವನಲ್ಲಿ ಹೋಗಿ ಬೇಡಿ ಕೊಳ್ಳುವವ ಮೂಢನು.
೧೭೨೭ ನೀತಿಯುಳ್ಳವನ ಮನೆ ದೀಪದಲ್ಲಿ ಜಾತಿಭೇದವೇನು.
೧೭೨೮ ನೀತಿಯುಳ್ಳವನ ಮಾತು ಕೋತಿಯಾದೀತೇ.
೧೭೨೯ ನೀತಿಯುಳ್ಳವನು ಖ್ಯಾತಿ ಪಟ್ಟಾನು.
೧೭೩೦ ನೀನು ನಾನು ಯೆಂಬ ಭೇದ ಜ್ಞಾನಿಗುಂಟೇ.
೧೭೩೧ ನೀನೇ ಸೆಟ್ಟಿ ಅಂದರೆ ಮಾನದ ಅಂಡಿನಲ್ಲಿ ಅಳದ ಹಾಗೆ.
೧೭೩೨ ನೀರ ಕಡೆಗೆ ನಾಟಿದ ಮರ ಚಿಗುರದೇ ಬಿಟ್ಟೀತೇ.
೧೭೩೩ ನೀರಲ್ಲಿ ನೋಡಿದವನ್ನ ಊರಲ್ಲಿಡ ಬಾರದು ಯೆಣ್ಣೆಲಿ ನೋಡಿದ ವನ್ನ ಕಣ್ಣಲ್ಲಿ ನೋಡ ಬಾರದು.
೧೭೩೪ ನೀರಲ್ಲಿ ಬರದ ಬರಹಾನ್ನ ಹಾಗೆ.
೧೭೩೫ ನೀರಾದರೂ ನಾರ ಬಾರದು.
೧೭೩೬ ನೀರಿನ ವೊಳಗಣ ಮುಳ್ಳಿನ ಹಾಗೆ.
೧೭೩೭ ನೀರಿನ ಮೇಲಣ ಗುಳ್ಳೇ ಹಾಗೆ.
೧೭೩೮ ನೀರಿನಿಂದ ಪಾಪ ಹೋದರೆ ನೀರೆಯಿಂದ ಪಾಪ ಹೋಗದೇ.
೧೭೩೯ ನೀರಿನೊಳಗಣ ಕಪ್ಪೆ ಬೈಲಿಗೆ ಹಾಕಿದ ಹಾಗೆ.
೧೭೪೦ ನೀರಿಲ್ಲದ ತಾವ ಊರು ಕಟ್ಟಿದ ಹಾಗೆ.
೧೭೪೧ ನೀರು ಇದ್ದರೆ ಊರು, ನಾರಿ ಇದ್ದರೆ ಮನೆ.
೧೭೪೨ ನೀರು ಯೆಲ್ಲಾ ವೊಂದೇ ಬಡಿದ ಕೋಲು ಮಾತ್ರ ಬೇರೆ.
೧೭೪೩ ನೀರು ಹಳ್ಳಕ್ಕೆ ಹೋದೀತೇ ಹೊರ್ತು ದಿನ್ನೆಗೆ ಹೋದೀತೇ.
೧೭೪೪ ನೀರು ಹೊರುವ ಬಡ್ಡಿಗೆ ಊರ ಪಾರುಪತ್ಯವ್ಯಾಕೆ.
೧೭೪೫ ನೀರುಳ್ಳಿ ನೀರಲ್ಲಿ ತೊಳದರೆ ನಾರೋದು ತಪ್ಪೀತೇ. [ನಾರದೇ.
೧೭೪೬ ನೀರುಳ್ಳಿಯವನ ಸಂಗಡ ಹೋರಾಟಕ್ಕೆ ಹೋದರೆ ಮೋರೆಲ್ಲ

೧೭೪೭ ನೀರೊಳಗಣ ಕಪ್ಪೆ ನೀರು ಕುಡಿಯದೆ ಬಿಟ್ಟೀತೇ.
೧೭೪೮ ನೀರೊಳಗೆ ಮೋರೆ ನೋಡಿ ಮರನೇರಿದ ಹಾಗೆ.
೧೭೪೯ ನೀರೊಳಗೆ ಹೋಮ ಮಾಡಿದ ಹಾಗೆ.
೧೭೫೦ ನೀಲದ ಮಣಿ ಪವಣಿಸಿದ ನೂದಲಾರೆ ನೀಲದ ಕ್ರಯ ಬಾಳೀತೇ.
೧೭೫೧ ನೀಲ ಬಾಲಕಗೆ ಚಂದ, ಕೋಲು ವೋಲೆಕಾರಗೆ ಚಂದ.
೧೭೫೨ ನೀಲ ಮಾರಿ ವೋಲೆ ಮಾಡಿದರೂ ಸಾಲದ ಉಪದ್ರ ನಿಲ್ಲಲಿಲ್ಲ.
೧೭೫೩ ನೀಮೀ ಮಾತು ನಿಜವಲ್ಲ.
೧೭೫೪ ನೀವಾದರೇನು ನಾವಾದರೇನು ಭಾವಿಲಿ ನೀರು ಬಂದರೆ ಸರಿ.
೧೭೫೫ ನೀವು ನಾಗಲೋಕದವರಾದರೆ ನಾವು ನಾಕಲೋಕದವರು.
೧೭೫೬ ನೀಳ್ಗದರ ನೆರಳೂ ಶೋಳಿಯ ಮಾತೂ ಘೂಳಿಯ ಹಾಗೆ.
೧೭೫೭ ನೀಳ್ಗದರ ಮೇಲೆ ನಿಂತರೆ ಘೂಳಿಗೇನು.
೧೭೫೮ ನೀಳ್ಗವಾದರೂ ಘೂಳಿಗೆ ಯೇನು.
೧೭೫೯ ನುಂಗ ಬಾರದ ತುತ್ತೂ ತುಟಿ ಮೀರಿದ ಹಲ್ಲೂ ಸಮ.
೧೭೬೦ ನುಂಗಿದ ತುತ್ತಿನ ರುಚಿ ಮತ್ತೆ ಬಯಸಿದ ಹಾಗೆ.
೧೭೬೧ ನುಗ್ಗಿದವನಿಗೆ ಹಗ್ಗ ತಪ್ಪೀತೇ.
೧೭೬೨ ನುಗ್ಗೆ ಆದರೂ ಮಗ್ಗುಲಿಗೆ ಬಂದೀತೇ.
೧೭೬೩ ನುಚ್ಚಾದರೂ ಹುಚ್ಚಗೆ ಬೇಕು.
೧೭೬೪ ನುಚ್ಚಾದರೂ ಹೆಚ್ಚೆಂತ ಭಾವಿಸ ಬೇಕು.
೧೭೬೫ ನುಚ್ಚಿಗೆ ಬೆಚ್ಚುವವ ನೊಚ್ಚಗೆ ಮಾತಾಡಿದರೂ ನಚ್ಚಿಗೆ ಸಾಲದು.
೧೭೬೬ ನುಡಿಯಾದರೂ ಕಡೆಯ ಬಾರದು.
೧೭೬೭ ನುಡಿಯಿಂದ ಊರು, ನುಡಿಯಿಂದ ಕಾಡು.
೧೭೬೮ ನುಸಿಗ್ಯಾಕೆ ಕಸಕಸೆ ಪಾಯಸ.
೧೭೬೯ ನೂಕಿಸಿ ಕೊಂಡು ಹೋಗೋದಕ್ಕಿಂತ ಮೇಕೆ ಕಾಯೋದು ಲೇಸು.
೧೭೭೦ ನೂಕು ನುಗ್ಗಿನಲ್ಲಿ ಮಾತನಾಡ ಬಾರದು, ನಾಚಿಸುವವರ ಮನೇ ಬಾಗಲು ತುಳಿಯ ಬಾರದು.

೧೭೭೧ ನೂಕುವವನ ಮನೆ ಊಟಕ್ಕಿಂತ ಬೋಕಿಯ ಊಟ ಲೇಸು.
೧೭೭೨ ನೂಕುವವನು ಹಾಕನು, ಬೋಕಿಯವನು ಕೊಡನು.
೧೭೭೩ ನೂತನಪಾದದಕ್ಕೆ ಸೋತವನು ನಾತದ ವಸ್ತುವಿಗೆ ಸೋತಾನೇ.
೧೭೭೪ ನೂರಿಗೆ ನೂರಾದರೂ ಕೆಟ್ಟವನ್ನ ನಂಬ ಬಾರದು.
೧೭೭೫ ನೂರು ಆರು ಇದ್ದರೂ ಕೇರಿ ಬೇಕು.
೧೭೭೬ ನೂರು ಹಾರಿ ಹೋಯಿತು, ಯೆರಡು ಬೆನ್ನು ಅಟ್ಟಿತು.
೧೭೭೭ ನೂಲಿನ ತಕ್ಕ ಶೀಲೆ, ಸಾಲಿನ ತಕ್ಕ ಯೆಡೆ.
೧೭೭೮ ನೂಲು ಹಿಡಿದು ಜೋಲುವವನ ಕಾಲು ಹಿಡಿದು ನೇತಾಡಿದ.
೧೭೭೯ ನೂಲೋ ಹೆಂಡತಿಯ ಬಿಟ್ಟು ಪೇಲೋ ಮೂಳಿಯ ತಂದ.
೧೭೮೦ ನೆಂಟರ ಮನೆಗೆ ನಾಯಿ ಹೊಕ್ಕರೆ ಯೆಂಟು ಊರಿಗೆ ಬೆರಕೆ.
೧೭೮೧ ನೆಂಟ ನೆಂಟಗೆ ಮಾರಿ, ಕುಂಟಿತ್ತು ಹೊಕ್ಕಲಕ್ಕೆ ಮಾರಿ.
೧೭೮೨ ನೆಕ್ಕೋ ನಾಯಿಗೆ ಲಿಂಗವೇನು, ಪೀಠವೇನು.
೧೭೮೩ ನೆಗಚೆ ಹೋದ್ದು ಮಗಚೆ ಬಂದೀತೇ.
೧೭೮೪ ನೆಗಡಿಯವ ಸೀನುವಾಗ್ಯೆ ಧಗಡೀ ಮಗನೆಂದರೆ ನಿತ್ತಾನೇ.
೧೭೮೫ ನೆಗದ ನೀರು ಅಗದು ನೋಡ ಬೇಕೆಂದು ಬಗದ.
೧೭೮೬ ನೆಗಳೆ ಹಾರಿದರೆ ಮುಗಿಲಿಗೆ ಮುಟ್ಟೀತೇ.
೧೭೮೭ ನೆಗ್ಗಿದ್ದು ಬಗ್ಗೀತೇ.
೧೭೮೮ ನೆಚ್ಚಿದ ಯೆಮ್ಮೆ ಕೋಣನಾಯಿತು.
೧೭೮೯ ನೆಚ್ಚಿದ ಕಾರ್ಯ ಪಚ್ಚಾದರೆ ಕಿಚ್ಚಾತಕ್ಕೆ.
೧೭೯೦ ನೆಚ್ಚಿದ ಸಿಪಾಯಿಗೆ ಬಚ್ಚಿದ ಕುದುರೆ.
೧೭೯೧ ನೆಟ್ಟಗೆ ಹೋಗಿ ಮುಟ್ಟಿ ಬಂದಂತೆ.
೧೭೯೨ ನೆಟ್ಟಾನ ಕಲ್ಲು ನಿಟ್ಟೋಟಾ ವೋದೀತೇ.
೧೭೯೩ ನೆತ್ತರಾ ನೋಡಿದರೆ ಗೋತ್ರಾ ತಿಳಿದೀತೇ.
೧೭೯೪ ನೆತ್ತಿಯ ವಾಸನಿಸಿದರೆ ಸತ್ತಿಗೆ ಹಿಡಿದ ಹಾಗೆಯೇ.

೧೭೯೫ ನೆನದ ಕೆಲಸಕ್ಕೆ ಮನವೇ ಸಹಾಯ.

೧೭೯೬ ನೆನಪು ಇಲ್ಲದ ಕೆಲಸ ಹನಿಕಿದರೆ ಆದೀತೇ.

೧೭೯೭ ನೆನಸಿದರೆ ಮನಸ್ಸು ಸ್ವಾಸ್ಥವಾದೀತೇ.

೧೭೯೮ ನೆನೆದ ಕಲ್ಲು ಮೆತ್ತಗೆ ಆದೀತೇ.

೧೭೯೯ ನೆಯ್ಯುವವನಿಗೆ ಲಾಳಿ, ನಗಕ್ಕೆ ಘಾಳಿ.

೧೮೦೦ ನೆರಮನೆ ಹಾಳಾದರೆ ಕರುಗಳು ಕಟ್ಟುವೆನು.

೧೮೦೧ ನೆರಮನೇ ಜಕಣಿಗೆ ಶವರಮನೇ ಶೀರೆಯೋ.

೧೮೦೨ ನೆರಮನೇ ಹೋಳಿಗೆಗೆ ತುಪ್ಪ ಕಾಯಿಸಿದ ಹಾಗೆ.

೧೮೦೩ ನೆರಹೊರೆಯುವರು ಕೂಡಿದರೂ ಬರುವ ಕೇಡು ತಪ್ಪಿಸಲಾರ್ರು.

೧೮೦೪ ನೆಲಕ್ಕೆ ಹಲ, ರಾಜ್ಯಕ್ಕೆ ಬಲ.

೧೮೦೫ ನೆಲದಲ್ಲಿ ಉಣ್ಣುವವನ ಸಂಗಡ ಯೆಲೇ ಕೇಳಿದ ಹಾಗೆ.

೧೮೦೬ ನೆಲದೊಳಗೆ ಇದ್ದರೂ ಖಲನಿಗೆ ಹೆದರ ಬೇಕು.

೧೮೦೭ ನೆಲ ಬಲವಂತನಿಗೆ, ಕುಲ ನೇಮವಂತನಿಗೆ.

೧೮೦೮ ನೆಲು ಹರಿದರೆ ನೆಲದ ಮೇಲೇ.

೧೮೦೯ ನೆಲು ಹರಿದು ಬೆಕ್ಕಿನ ಮುಂದೆ ಬಿದ್ದ ಹಾಗೆ.

೧೮೧೦ ನೆಲೆ ಇಲ್ಲದವನ ಮಾತು ಹೊಲೆಗಿಂತ ಹೆಚ್ಚು.

೧೮೧೧ ನೆಲ್ಲೀಕಾಯಿ ಹುಲ್ಲೆಗೆ ಆದೀತೇ.

೧೮೧೨ ನೆಲ್ಲೂ ಮೊಸರೂ ಕಲಸಿದ ಹಾಗೆ.

೧೮೧೩ ನೆವದಿಂದ ಹೋದರೆ ನೋವು ತಪ್ಪೀತೇ.

೧೮೧೪ ನೆವರಿ ಕೊಂಡು ಹೋಗುವವ ಬವರಕ್ಕೆ ಬಂದಾನೇ.

೧೮೧೫ ನೆವವಿಲ್ಲದೆ ಜವ ಕೊಂಡು ಹೋಗ.

೧೮೧೬ ನೆಸೆ ಕೊಟ್ಟವ ಹಸೆ ಕದ್ದು ಕೊಂಡು ಹೋದ.

೧೮೧೭ ನೆಸ್ತಾಟಕ್ಕೆ ಹೋಗಿ ಮಸ್ತಾಟ ಹೆಚ್ಚಿತು.

೧೮೧೮ ನೆಳಲು ಇದ್ದ ಮರ ಚಂದ, ನಳಿನವಿದ್ದ ಕೊಳ ಚಂದ.

೧೮೧೯ ನೆಳಲು ಇಲ್ಲದ ಬಳೀಮಿ ಬಲವುಳ್ಳವನಾದರೂ ಕಳಕಳಿಸನೇ.
೧೮೨೦ ನೆಳಲು ಬೂರಗಕ್ಕಿಲ್ಲ, ಖೂಳಗೆ ನೀತಿ ಇಲ್ಲ.
೧೮೨೧ ನೆಳಲು ಶೇರ ಬೇಕೆಂದು ಹಳುವಕ್ಕೆ ಹೋದ ಹಾಗೆ.
೧೮೨೨ ನೇಗಲು ಉತ್ತರೆ ಹೊಲ, ಹಾಲು ಇದ್ದರೆ ಗೋವು.
೧೮೨೩ ನೇಣು ಹಾಕಿ ಕೊಳ್ಳುವವನ ಹತ್ತಿರ ಹೋಗಿ ಕೋಣ ಕೇಳಿದ.
೧೮೨೪ ನೇತಾಡುವವನ ಹತ್ತಿರ ಮಾತಾಡಲಿಕ್ಕೆ ಹೋದರೆ ಜೋತಾಡುವ
ದು ಸಿಕ್ಕೀತು.
೧೮೨೫ ನೇಪಾಳ ದೇಶದ ಭೂಪಾಲನಾದರೆ ಗೋಪಾಳದವನಿಗೆ ಯೇನು.
೧೮೨೬ ನೇಮವಿದ್ದರೆ ವ್ರತ, ಹೋಮವಿದ್ದರೆ ಶೋಭನ. [ಯಿತು.
೧೮೨೭ ನೇಮ ಹೆಚ್ಚಿ ಹೋಮ ಮೀರಿ ಶ್ವಾನನ ಹಾಗೆ ತಿರುಗಾಡುವದಾ
೧೮೨೮ ನೇಯಿಗೆ ನೈದರೆ ಕೂಡೀತಲ್ಲದೆ ನೆಗದರೆ ಕೂಡೀತೇ.
೧೮೨೯ ನೇಯಿಗೆಯವನ ಕೈಯೂ ವೋದುವವನ ಬಾಯೂ ಚುರುಕಾ
೧೮೩೦ ನೇಯಿಗೆಯವನ ಮಟ್ಟು ಕಟ್ಟುವವ ಬಲ್ಲ. [ಗಿರ ಬೇಕು.
೧೮೩೧ ನೇಯಿಗೆಯವನಿಗ್ಯಾಕೆ ಕೋತೀ ಮರಿ.
೧೮೩೨ ನೇಯಿಗೆಯಾದರೂ ನಯವಿದ್ದರೆ ನಾಣ್ಯ ಸಿಕ್ಕಿತು.
೧೮೩೩ ನೇಯಿದರೆ ಬಟ್ಟೆ, ಕಟ್ಟಿದರೆ ಮೊಟ್ಟೆ.
೧೮೩೪ ನೇವಳವಾದರೆ ಹವಳದ್ದು ಆದೀತೇ.
೧೮೩೫ ನೈದಿಲೆಯಾದರೂ ಕೊಯ್ದರೆ ಬೈದಲೇ ಮೇಲೆ.
೧೮೩೬ ನೈವೇದ್ಯಕ್ಕೆ ನಾಯಿ ಮುಟ್ಟಿದರೆ ನೈಷಧಪತಿ ಯೇನು ಮಾಡ್ಯಾನು.
೧೮೩೭ ನೊಂದವನಿಗೆ ನೋಯಿಸಿದರೆ ಕೊಂದ ಪಾಪವಲ್ಲವೇ.
೧೮೩೮ ನೊಂದಿಸಿದಷ್ಟೂ ಉರಿದರೆ ಹಂದಿ ಯೇನು ಮಾಡೀತು.
೧೮೩೯ ನೊಗ ಇದ್ದರೆ ನೇಗಲು, ಮಗ ಇದ್ದರೆ ತಂದೆ.
೧೮೪೦ ನೊಣ ಕೂಡಿಸಿದ ಜೇನು ಮಣುವಾದರೆ ಹೆಣ ಹೊತ್ತವನಿಗೇನು.
೧೮೪೧ ನೊಣ ಕೂತರೆ ವ್ರಣ ಹೊತ್ತರ್ಜ ಹೆಣ ಜೀವಿಸೀತೆ.

೧೮೪೨ ನೊಣದಂತೆ ತಾನೂ ಕೆಟ್ಟು ಪರರನ್ನೂ ಕೆಡಿಸುತ್ತಾನೆ.
೧೮೪೩ ನೊಣ ಬಿದ್ದ ಊಟಾ ಮಾಡಿ ಕಳಕಳಿಸಿದ ಹಾಗೆ.
೧೮೪೪ ನೊಣ ಮಣುವಾದೀತೇ.
೧೮೪೫ ನೊರೆ ಕಾರುವಾಗ್ಯೆ ಹರ ಯೆಂದರೆ ಬಿಟ್ಟೀತೇ.
೧೮೪೬ ನೊಸಲಿನ ಬರಹ ಬಸಲೆಯಿಂದ ತೊರಸ ಬಹುದೇ.
೧೮೪೭ ನೋಟ ಇಲ್ಲದೆ ತೋಟ ಮಾಡಿದರೆ ಕಾಟಾ ತಪ್ಪದು.
೧೮೪೮ ನೋಟಕ್ಕೆ ನಾಟ್ಯ, ಊಟಕ್ಕೆ ಕೂಟ.
೧೮೪೯ ನೋಟಕ್ಕೆ ಹೋಗಿ ಊಟಾ ಬಿಟ್ಟು ಕಾಟಾ ತಂದು ಕೊಂಡ.
೧೮೫೦ ನೋಟದಿಂದ ಕಣ್ಣು ತೋಟಿ ಆಯಿತು.
೧೮೫೧ ನೋಟ ನೆಟ್ಟಗಿದ್ದರೆ ಕಾಟ ಹ್ಯಾಗೆ ಬಂದೀತು.
೧೮೫೨ ನೋಟ ನೋಡದರೆ ಕಾಟ ಉಂಟು.
೧೮೫೩ ನೋಟ ಪರರಿಕ್ಷೆ ಊಟ ಮನಗಿಷ್ಟೆ.
೧೮೫೪ ನೋಡದ ಕಣ್ಣಿಗೆ ಕಾಣದ ಗೊಂಬೆ.
೧೮೫೫ ನೋಡದ ಕೆಲಸಕ್ಕೆ ಆಡದ ಸಂಬಳ.
೧೮೫೬ ನೋಡದ ವಸ್ತು ಆಡಿದರೆ ಬಂದೀತೇ.
೧೮೫೭ ನೋಡದೆ ಆಡಿದರೆ ಕೇಡು ತಪ್ಪದು.
೧೮೫೮ ನೋಡಿ ಕೊಂಡು ಉಣ್ಣದಿದ್ದರೆ ಮಾಡಿದವಳಿಂದ ಯೇನು.
೧೮೫೯ ನೋಡಿದರೆ ಕಾಣದ್ದು ತೋಡಿದರೆ ಸಿಕ್ಕೀತೇ.
೧೮೬೦ ನೋಡಿದಷ್ಟು ಮಗ ಬಡವನಾದರೆ ಮಾಡಿದವರ ಪುಣ್ಯ.
೧೮೬೧ ನೋಡಿ ನಡಿಯೋನಿಗೆ ಕೇಡು ಬಾರದು. [ತಿಂದಿತು.
೧೮೬೨ ನೋಡಿ ಬರದರೆ ಪರರನ್ನ ತಿಂದಿತು, ನೋಡದೆ ಬರದರೆ ತನ್ನನೇ
೧೮೬೩ ನೋಡಿ ಬಾ ಯೆಂದರೆ ಸುಟ್ಟು ಬಂದ.
೧೮೬೪ ನೋತವಾದರೆ ಹೇತರೆ ತಪ್ಪಿತೇ.
೧೮೬೫ ನೋತ ಉಳ್ಳವನು ಕೋತಿಯ ಹಾಗೆ.

೧೮೬೬ ನೋವು ಕಾಮಿಸುನರಿಲ್ಲ, ನಾಯಿ ಬೊಗಳಿಸುವರಿಲ್ಲ.

೧೮೬೭ ನೌರು ಕೂಡಿ ನಗ, ನೊಣ ಕೂತು ವ್ರಣ.

೧೮೬೮ ನ್ಯಾಯಕ್ಕೆ ಸಹಾಯವೇ ಬಲ.

೧೮೬೯ ನ್ಯಾಯದಿಂದ ಆಯ ಹುಟ್ಟುವದು.

೧೮೭೦ ನ್ಯಾಯವಿಲ್ಲದವ ನಾಯಿಗಿಂತ ಕಡೆ.

೧೮೭೧ ಪಂಕಜವಾದರೆ ಮಂಕುಗೆ ದೊಡ್ಡದೇ.

೧೮೭೨ ಪಂಕ್ತೀ ಊಟವಾದರೂ ಸಂಗ್ತೀ ಗುಣ ಬಿಡಲಿಲ್ಲ.

೧೮೭೩ ಪಂಕ್ತೀಲಿರುವವನಿಗೆ ಪಂಥ ಇರ ಬಾರದು.

೧೮೭೪ ಪಂಗಡವಾದವ ಸಂಗಡ ಬಂದಾನೇ.

೧೮೭೫ ಪಂಗು ಆಶ್ರಯ ಮಾಡಿ ಅಂಗ ಕಳಕೊಂಡ.

೧೮೭೬ ಪಂಗುವಾದರೂ ಲಿಂಗ ಪೂಜೆ ಇದ್ದರೆ ಭಂಗವಾಗ.

೧೮೭೭ ಪಂಗುವಿಗೆ ಪರಮ ಹಿಂಸೆ ಅಲ್ಲವೇ.

೧೮೭೮ ಪಂಚಮದ ಶನಿ ಹಂಚಿನಲ್ಲಿ ಉಣಿಸ್ಯಾನು.

೧೮೭೯ ಪಂಚಮ ಶಾಲೆಯವರ ಕಂಚು ಪಂಥಕ್ಕೆ ಸಿಕ್ಕೀತೇ.

೧೮೮೦ ಪಂಚಲೋಹದ ಹಂಚು ಆದರೆ ಸಂಚಗಾರ ಕೊಡ ಬಾರದೇ.

೧೮೮೧ ಪಂಚ ರತ್ನಕ್ಕೆ ಮಂಚದ ಕಾಲು ಕ್ರಯವೇ.

೧೮೮೨ ಪಂಚಾಂಗ ಹೋದರೆ ನಕ್ಷತ್ರ ಹೋದೀತೇ.

೧೮೮೩ ಪಂಚಾಲ ದೇಶದ ಪಾಲಕನಾದರೆ ಪಂಚಾಂಗದವನಿಗೇನು.

೧೮೮೪ ಪಂಚಾಲಿರು ದಂಡಿಗೆ ಹತ್ತಿದ ಹಾಗೆ.

೧೮೮೫ ಪಂಜರದಲ್ಲಿ ಕಾಗೆ ಇಟ್ಟರೆ ಪಂಚಮಸ್ವರ ಕೊಟ್ಟೀತೇ.

೧೮೮೬ ಪಂಡಿತರೆಂದರೆ ಹೆಂಡತೀ ಕೊಟ್ಟು ಹೋಗು ಅಂದ.

೧೮೮೭ ಪಂತ ಹಾಕಿದವರ ಹತ್ತಿರ ಶಾಂತನಾಗಿರ ಬೇಕು.

೧೮೮೮ ಪಕಪಕ ನಗುವವರನ್ನ ನೋಡಿ ಬಿಕ್ಕಿ ಬಿಕ್ಕಿ ಅತ್ತ.

೧೮೮೯ ಪಕ್ಕವಿದ್ದರೆ ಹಕ್ಕಿ ಹಿಡೀಲಿ ಕೊಟ್ಟ ಠೊಕ್ಕಕ್ಕೆ ದುಃಖವೇನು.

೧೮೯೦ ಪಕ್ಕವಿಲ್ಲದಕ್ಕೆ ಕೊಕ್ಕೆ ಇದ್ದರೆ ಪ್ರಯೋಜನವೇನು.
೧೮೯೧ ಪಗಡೆಯಾಡಿ ಪಾಂಡವರು ಕೆಟ್ಟರು.
೧೮೯೨ ಪಗದಿ ಕೊಡದವನಿಗೆ ನಿಗದಿ ಮಾಡಿ ಯೇನು.
೧೮೯೩ ಪಚ್ಚ ಮಾತಾಡುವವನು ಬೆಚ್ಚ ಬೀಳನೇ.
೧೮೯೪ ಪಚ್ಚೆಯಾದರೂ ಮೆಚ್ಚಿ ತೆಗದುಕೋ ಬೇಕು.
೧೮೯೫ ಪಚ್ಚೆಯಾದರೆ ನುಚ್ಚಿಗಿಂತ ಕಡಿಮೆಯೇ.
೧೮೯೬ ಪಟಿಂಗನ ಸಂಗಡ ಪಟ್ಟಾಂಗಕ್ಕೆ ಹೋದರೆ ಪಡಿದವಸಕ್ಕೇಡು.
೧೮೯೭ ಪಟಿಂಗ ಪಟ್ಟೆ ಉಟ್ಟು ಕೊಂಡರೆ ಪಟ್ಟಕ್ಕೆ ಸಂದಾನೇ.
೧೮೯೮ ಪಟ ಹಾರಿದರೆ ಮಠ ಹಾರೀತೇ.
೧೮೯೯ ಪಟ್ಟೆ ಕಟ್ಟಿದರೂ ಪಟ್ಟು ಹೋಗಲಿಲ್ಲ.
೧೯೦೦ ಪಟ್ಟಣಕ್ಕೆ ಅರಸು ಬಲ, ಕಟ್ಟಣಕ್ಕೆ ಕಲ್ಲು ಬಲ.
೧೯೦೧ ಪಟ್ಟಣಕ್ಕೆ ಹೋದರೂ ಕುಟ್ಟೋದು ತಪ್ಪದು.
೧೯೦೨ ಪಟ್ಟಣದಲ್ಲಿ ಪಟ್ಟಾಭಿಷೇಕವಾದರೆ ನಟ್ಟಡವಿಯಲ್ಲಿದ್ದವರಿಗೇನು.
೧೯೦೩ ಪಟ್ಟೇ ವೀಳ್ಯಕ್ಕೆಂತ ಹೋಗಿ ಕುಟ್ಟಿಸಿ ಕೊಂಡು ಬಂದ.
೧೯೦೪ ಪಟ್ಟೇ ವೀಳ್ಯವಾದರೆ ಭಟ್ಟರಿಗಾಗದೇ.
೧೯೦೫ ಪಟ್ಟಿ ಇಲ್ಲದಿದ್ದರೆ ಜಟ್ಟಿಗೆ ಬಡತನವೇ.
೧೯೦೬ ಪಟ್ಟಿಗೆ ಮೈಲಿಗೆ ಇಲ್ಲ. ಮುತ್ತೈದೆಗೆ ಹಾದರ ಸಲ್ಲ.
೧೯೦೭ ಪಟ್ಟೆಯುಟ್ಟರೂ ಮಟ್ಟಿನವ ಶ್ರೇಷ್ಠನೆ.
೧೯೦೮ ಪಡದ ಮಗನಿಗೆ ಕಡದ ಬೆಣ್ಣೆ ಆಗದೇ.
೧೯೦೯ ಪಡದಷ್ಟು ಹಡದಕ್ಕೆ ಹೋಗಿ ಕಡೆಗೆ ಬಡತನ ತಪ್ಪಲಿಲ್ಲ.
೧೯೧೦ ಪಡವಲಕಾಯಿ ಹೈಸರು ಯೆಂದು ನಡುಮನೆ ಬಿಟ್ಟು ವೋಡಿ [ಹೋದ.
೧೯೧೧ ಪಡಿ ಕೊಟ್ಟರೂ ಪರಡೋದು ಬಿಡ.
೧೯೧೨ ಪಡಿಗೆ ಬಂದವಗೆ ಕಡಿ ಅಕ್ಕಿ ಆಗದೇ.
೧೯೧೩ ಪಡುವಣ ಮನೆಗೆ ಮೂಡಣ ದೀಪ.

೧೯೧೪ ಪಡುಸಾಲೇ ಊಟ, ನಡುಸಾಲೇ ನಿದ್ರೆ. [ಹತ್ತಿರ ನಿಲ್ಲಲಾಗದು.
೧೯೧೫ ಪಣ ಕಟ್ಟುವವನ ಹತ್ತಿರ ಹೋಗ ಬಹುದು, ಹಣ ಕೂಡಿಸುವವನ
೧೯೧೬ ಪತಿ ಇದ್ದವಳೇ ಸತಿ, ಯೆತಿ ಇದ್ದದ್ದೇ ಕ್ಷೇತ್ರ.
೧೯೧೭ ಪತಿ ಇಲ್ಲದ ಸತಿ, ಗತಿ ಇಲ್ಲದ ದಾತಾರ.
೧೯೧೮ ಪತಿ ಶೂನ್ಯಳಾದರೂ ಮತಿ ಶೂನ್ಯಳಾಗ ಬಾರದು.
೧೯೧೯ ಪತಿ ಹೋದರೆ ಖತಿ ಹೋಯಿತೇ.
೧೯೨೦ ಪತ್ನಿ ಇದ್ದವನು ಯತ್ನ ಮಾಡಿದರೆ ರತ್ನ ಸಿಕ್ಕೀತೇ.
೧೯೨೧ ಪತ್ರೆ ಇಲ್ಲದ ಪೂಜೆ, ಪತ್ರವಿಲ್ಲದ ಸಾಲ.
೧೯೨೨ ಪಥ್ಯ ಹಾಕುವವನ ಬೆರಳು ಕಚ್ಚಿದ ಹಾಗೆ.
೧೯೨೩ ಪದ ಕಸ, ಸ್ವರ ಸರ.
೧೯೨೪ ಪದಕ ಹೋಯಿತೆಂತ ಬದುಕಲಾರನೇ.
೧೯೨೫ ಪದ ತಪ್ಪಿದರೆ ಪ್ರಾಸು ತಪ್ಪೀತೇ.
೧೯೨೬ ಪದದಂತೆ ತಾಳ, ಮದದಂತೆ ಗರ್ವ.
೧೯೨೭ ಪದ ಬಾರದಿದ್ದರೆ ಮದ ಹೋದೀತೇ.
೧೯೨೮ ಪದರು ಗಾಳಿಸಿದ ಬುದ್ಧಿ ಗದರಿಸಿದರೂ ಹೋಗದು.
೧೯೨೯ ಪದಾರ್ಥದ ರುಚಿ ಇಲ್ಲದವಗೆ ಕದಾನ್ನವ್ಯಾಕೆ.
೧೯೩೦ ಪದೇಪದೇ ಹೇಳಿದರೂ ಸದೆ ಕೂಡಿಸೋದು ಬಿಡ.
೧೯೩೧ ಪದ್ಯ ತಿಳಿಯದಿದ್ದರೆ ಗದ್ಯವಾದರೂ ತಿಳಿಯದೇ.
೧೯೩೨ ಪಯಣಕ್ಕೆ ಹೋಗುವವಗೆ ಅಯನದ ಸುದ್ದಿ ಯಾಕೆ.
೧೯೩೩ ಪಯಸ್ವಿನಿ ನದಿಗೆ ಹೋದರೆ ಪಾಯಸ ಸಿಕ್ಕೀತೇ.
೧೯೩೪ ಪರಕೆ ಹೇಳಿ ಕೊಂಡರೆ ಪರಕ್ಕೆ ಹೋದಾನೇ.
೧೯೩೫ ಪರಡೀ ರುಚಿ ಕರಡಿಗೆ ತಿಳಿದೀತೇ.
೧೯೩೬ ಪರತರವಾದದ್ದು ಹರದರಲ್ಲಿ ಸಿಕ್ಕೀತೇ.
೧೯೩೭ ಪರದೇಶಕ್ಕೆ ಹೋದರೆ ಪರವಾಸ ತಪ್ಪದು.

೧೮೩೮ ಪರನಿಂದೆ ಗೃಹಕ್ಷಯ, ಯತಿನಿಂದೆ ಕುಲಕ್ಷಯ.

೧೮೩೯ ಪರಪಕ್ಷ ಮಾಡುವವನಿಗೆ ಪರಲೋಕವಿಲ್ಲ.

೧೮೪೦ ಪರಮಗತಿ ಯೆಂಬದು ನೆರಮನೇ ಹಟ್ಟಿಯೋ.

೧೮೪೧ ಪರಮಾತ್ಮನ್ನ ತಿಳಿಯದಿದ್ದರೆ ಪರಮಾನ್ನ ತಿನ್ನಲಿಕ್ಕೆ ಕಡಿಮೆಯೇ.

೧೮೪೨ ಪರಮೇಶನಾದರೂ ಸ್ಮಶಾನ ತಪ್ಪಲಿಲ್ಲ.

೧೮೪೩ ಪರರನ್ನು ಕಾಯೋಕ್ಕಿಂತ ಪಶುಗಳ ಕಾಯೋದು ಲೇಸು.

೧೮೪೪ ಪರಲೋಕಕ್ಕೆ ಹೋದವಗೆ ನರಲೋಕದ ಗೊಡವೆಯೇ.

೧೮೪೫ ಪರಲೋಕವೆಂಬದು ಫಲಮಾರ ಗುಡ್ಡೆಯೇ.

೧೮೪೬ ಪರವಾಸ ಮಾಡಿದರೂ ಸಹವಾಸ ಬೇಕು.

೧೮೪೭ ಪರವಾಸ ಮಾಡುವವನ ಭರವಸ ಸಲ್ಲದು.

೧೮೪೮ ಪರಶು ಸಿಕ್ಕಿದರೂ ನಿರಸವಿದ್ದವಗೆ ಸಲ್ಲದು.

೧೮೪೯ ಪರಶೇ ಯಜಮಾನನೆಂದು ಪರರ ಹೇಸಿಗೆ ತೆಗಸಿದ ಹಾಗೆ.

೧೮೫೦ ಪರಹಿತ ಮಾಡಿ ತನ್ನ ಹಿತ ತಪ್ಪಿಸಿ ಕೊಂಡ.

೧೮೫೧ ಪರಾಧೀನನಾದರೆ ನರಜನ್ಮ ಹೋದೀತೇ.

೧೮೫೨ ಪರಾನ್ನಕ್ಕೆ ಹೋಗಿ ಪ್ರಾಣಸಂಕಟ ಬಂತು.

೧೮೫೩ ಪರಿಮಳದ ಹೂ ಪರಿಮಳದಲ್ಲೇ ಇರ ಬೇಕು.

೧೮೫೪ ಪರ್ವಕಾಲದಲ್ಲಿ ಹಾರ್ವನಾದರೆ ಗರ್ವವ್ಯಾಕೆ.

೧೮೫೫ ಪರ್ವತದಲ್ಲಿದ್ದವ ಪರ್ವತರಾಯನಾದಾನೇ.

೧೮೫೬ ಪರ್ವತವೇರಿದವನು ಪರಲೋಕಕ್ಕೆ ಹೋದಾನೇ.

೧೮೫೭ ಪಲ್ಲಕ್ಕೀಲಿ ಕೂತರೂ ನಲ್ಲನಲ್ಲಿ ಹೋಗೋದು ತಪ್ಪಲಿಲ್ಲ.

೧೮೫೮ ಪಶುವಿದ್ದರೆ ಪವಿತ್ರ, ಹಸಿವಿದ್ದರೆ ಊಟ.

೧೮೫೯ ಪಳ್ಳಿ ಆಡಿದರೂ ತಳ್ಳಿ ಬಿಟ್ಟು ಹೋಗದು.

೧೮೬೦ ಪಕ್ಷ ಪಾಂಡವರಲ್ಲಿ, ಊಟ ಕೌರವರಲ್ಲಿ.

೧೮೬೧ ಪಕ್ಷಭೇದಾ ಮಾಡಿದವಗೆ ಶಿಕ್ಷೆ ತಪ್ಪದು.

೧೮೬೨ ಪಕ್ಷವಿಲ್ಲದವಗೆ ಲಕ್ಷವೇನು.

೧೮೬೩ ಪಕ್ಷವಿಲ್ಲದಿದ್ದರೂ ಭಕ್ಷ್ಯಕ್ಕೆ ಕಡಿಮೆಯೇ.

೧೮೬೪ ಪಕ್ಷಾ ಮಾಡುವವ ರಕ್ಷಕನಾದಾನೇ.

೧೮೬೫ ಪಕ್ಷಿಗೆ ಆಕಾಶವೇ ಬಲ, ಮತ್ಸ್ಯಕ್ಕೆ ನೀರೇ ಬಲ.

೧೮೬೬ ಪಕ್ಷಿಗೆ ಗೂಡು, ಮಕ್ಕಳಿಗೆ ತಾಯಿ.

೧೮೬೭ ಪಾಂಡವನಾಗಿ ಕಾಂಡಾವನಾ ದಹಿಸಲಿಲ್ಲವೇ.

೧೮೬೮ ಪಾಂಡವರಂದರೆ ವೊಂಡಾರ ಕಂಬಳದ ಕೋಣಗಳೋ.

೧೮೬೯ ಪಾಕಾ ಮಾಡಿದವನು ನಾಕವನೇರುವನೋ.

೧೮೭೦ ಪಾಗಾರಾ ಹಾರದವನು ಸಾಗರ ಹಾರ‍್ಯಾನೇ.

೧೮೭೧ ಪಾಟಿ ಇಲ್ಲದವನು ಸಾಟಿ ವೊಗದಾನೇ.

೧೮೭೨ ಪಾಠದಲ್ಲಿ ಕಡಿಮೆಯಾದರೂ ಮಾತಿನಲ್ಲಿ ಕಡಿಮೆ ಇಲ್ಲ.

೧೮೭೩ ಪಾಠ ಬಾರದಿದ್ದರೂ ಆಟ ಬರುತ್ತದೆ.

೧೮೭೪ ಪಾಠವಿಲ್ಲದಿದ್ದರೂ ನೋಟವಿರ ಬೇಕು.

೧೮೭೫ ಪಾಠಾ ಹೇಳುವವಗೆ ಕೋಟದ ಸುದ್ದಿ ಯಾಕೆ.

೧೮೭೬ ಪಾಡ್ಯ ಪಾಠಕ್ಕಾಗದು, ಮೌಢ್ಯ ಕೆಲಸಕ್ಕಾಗದು.

೧೮೭೭ ಪಾಡ್ಯವಾದರೂ ಸದ್ಯವಿರ ಬಾರದು.

೧೮೭೮ ಪಾಣಿ ಗ್ರಹಣವಾದರೆ ಗಾಣಗಿತ್ತಿಗೆ ಯೇನು.

೧೮೭೯ ಪಾತಾಳವಾದರೆ ಪಾತ್ರಮೇಳದವರಿಲ್ಲವೇ.

೧೮೮೦ ಪಾತ್ರವಿದ್ದಷ್ಟೆ ನೀರು ಸಿಕ್ಕೀತು.

೧೮೮೧ ಪಾದಕ್ಕೆ ತಕ್ಕ ಪಾಪೋಸು, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ.

೧೮೮೨ ಪಾದಕ್ಕೆ ಪಾಪೋಸು, ಪಾಪಿಗೆ ಪುಟಗೋಸಿ.

೧೮೮೩ ಪಾದಕ್ಕೆ ಬಿದ್ದರೂ ನಾಗಪ್ಪ ಕಚ್ಚದೆ ಬಿಡ.

೧೮೮೪ ಪಾದುಕಾ ಸಿದ್ಧಿ ಇದ್ದರೂ ಸಾರೋದು ತಪ್ಪದು.

೧೮೮೫ ಪಾದ್ಯಕ್ಕೆ ನೀರು ಇಲ್ಲ, ಊಟಕ್ಕೆ ಮಜ್ಜಿಗೆ ಯೆಲ್ಲಿ.

೧೯೮೬ ಪಾನಕಾ ಕುಡಿಯುಸಾಗ್ಯೆ ಮಾಣಿ ಕುತ್ತಿಗೇ ಹಿಡಿದ.

೧೯೮೭ ಪಾನಕಾ ಬೇಕೆಂದು ಶುನಕಕ್ಕೆ ಕರದ ಹಾಗೆ.

೧೯೮೮ ಪಾಪ ಬರ ಬಾರದೆಂದು ಶಾಪ ಕೊಂಡ.

೧೯೮೯ ಪಾಪದಲ್ಲಿ ತಾಪ ತಪ್ಪದು.

೧೯೯೦ ಪಾಪ ಹೋಗ ಬೇಕೆಂದು ಟೋಪಿ ಇಟ್ಟು ಕೊಂಡ.

೧೯೯೧ ಪಾಪಾತ್ಮನ್ನ ಪರಮಾತ್ಮ ತಿಳಿಯನೇ.

೧೯೯೨ ಪಾಪಿ ಇದ್ದಲ್ಲಿ ಪಾತಾಳ.

೧೯೯೩ ಪಾಪಿಗಳ ದೇವರೆಂದು ಪಾಪೋಸಿನಿಂದ ಹೊಡಿಯ ಬಾರದು.

೧೯೯೪ ಪಾಪಿಗೆ ಪರಮಾಯು, ಲೋಭಿಗೆ ಚಿರಾಯು.

೧೯೯೫ ಪಾಪಿಗೆ ಪರಲೋಕವಿಲ್ಲ, ಪಾಪೋಸಿಗೆ ಮಡಿ ಇಲ್ಲ.

೧೯೯೬ ಪಾಪಿಗೆ ಪಾರಾಯಣದ ಯೋಚನೆಯುಂಟೇ.

೧೯೯೭ ಪಾಪಿ ಘುಳಿಸಿದ್ದು ಪರರ ಪಾಲು.

೧೯೯೮ ಪಾಪಿ ಪರಕ್ಕೆ ಹೋದಾನೇ.

೧೯೯೯ ಪಾಪಿ ಪರರ ಕಷ್ಟ ಬಲ್ಲನೇ.

೨೦೦೦ ಪಾಪಿಯ ಕೆಡಿಸಿದವರಿಲ್ಲ, ಪುಣ್ಯವಂತನ ಬದುಕಿಸಿದವರಿಲ್ಲ.

೨೦೦೧ ಪಾಪಿಯ ಧನ ಪರರಿಗೆ, ಧೋಭಿಯ ಧನ ಕತ್ತೆಗೆ.

೨೦೦೨ ಪಾಪಿಯಾದವ ಭೂಪತಿಯಾದಾನೋ.

೨೦೦೩ ಪಾಪಿ ಸಮುದ್ರಕ್ಕೆ ಹೋದರೂ ಮೊಣಕಾಲುದ್ದ ನೀರು.

೨೦೦೪ ಪಾಪೀ ಗಂಟು ಪರರಿಗೆ, ಮುಂಡೇ ಗಂಟು ಕಂಡವರಿಗೆ.

೨೦೦೫ ಪಾಯಸಕ್ಕೆ ಆಯಾಸ ಪಟ್ಟು ವಾಯಸಾ ಕೊಂದು ತಿಂದ.

೨೦೦೬ ಪಾಯಸವಾದರೂ ಆಯಾಸದ ಹೊತ್ತು ಸಿಕ್ಕದು.

೨೦೦೭ ಪಾರಣೆಯಾದರೂ ಪಾರಾಯಣ ತೀರಲಿಲ್ಲ.

೨೦೦೮ ಪಾರುಪತ್ಯಗಾರನಾದರೆ ಹಾರಿ ಹೋದಾನೋ.

೨೦೦೯ ಪಾಲಕನು ಬಾಲಕನಾದರೆ ಹಾಳಿಗೇನು ದರಿದ್ರವೋ.

೨೦೧೦ ಪಾಲನೆ ಇಲ್ಲದಿದ್ದರೆ ಲಾಲನೆಗೆ ಕಡಿಮೆಯೇ.

೨೦೧೧ ಪಾಲಿನಲ್ಲಿ ಹರಿವೆಯಾದರೂ ಹಾಕ ಬಾರದು.

೨೦೧೨ ಪಾಲು ತೀರಿ ಹೋದರೆ ಹಾಲು ಕೊಡ ಬಾರದೇ.

೨೦೧೩ ಪಾಲು ಮಾಡಿದರೆ ಹಾಳು.

೨೦೧೪ ಪಾವಲೆ ಇಲ್ಲದಿದ್ದರೆ ಧರಣಿ ಕೊಡ ಬಾರದೇ.

೨೦೧೫ ಪಾಶಾಂಡಿಗೆ ಶೋಕವಿಲ್ಲ, ಪಾಶಾಣಕ್ಕೆ ರೋಗವಿಲ್ಲ.

೨೦೧೬ ಪಾಶಾಣದ ಭೋಗ ಸ್ಮಶಾನದ ಸ್ಥಿತಿ ಯಾರು ಬಲ್ಲಿರು.

೨೦೧೭ ಪಿಂಡಕ್ಕೆ ಬಗೆ ಇಲ್ಲದವ ದಂಡ ಯೇನು ಕೊಟ್ಟಾನು.

೨೦೧೮ ಪಿಂಡಪ್ರದಾನ ಮಾಡಿದರೂ ರಂಡೇರಿಗೆ ಗತಿಯಾಗಲಿಲ್ಲ.

೨೦೧೯ ಪಿಂಡ ಹಾಕಿದರೂ ಲಂಡನೆನಿಸಿ ಕೊಳ್ಳೋದು ತಪ್ಪಲಿಲ್ಲ.

೨೦೨೦ ಪಿತನಿಲ್ಲದ ಮಗನ್ನ ಸಾಕಿದವನೇ ತಂದೆ.

೨೦೨೧ ಪಿತಾ ಮಾತಾ ಮುನಿದ ಸುತನಿಗೆ ಗತಿ ಯೇನು.

೨೦೨೨ ಪಿತೂರಿ ಮಾಡಿದರೂ ತುತೂರೀ ಧ್ವನಿ ತಡಿಸಲಿಕ್ಕೆ ಕೂಡಲಿಲ್ಲ.

೨೦೨೩ ಪಿತೂರಿ ಮಾಡಿದವ ಪಿತನಿಗೆ ಬಲ್ಲನೇ.

೨೦೨೪ ಪಿತ್ತ ತಲೆಗೇರಿದವನಿಗೆ ಶಂಖಕರ್ರಗೆ ಕಂಡರೆ ಅದರ ಬಣ್ಣಾ ಕೆಟ್ಟೀತೇ.

೨೦೨೫ ಪಿತ್ತ ಭ್ರಮೆ ಇದ್ದವಗೆ ಚಿತ್ತ ಭ್ರಮೆಯಾಗದೇ.

೨೦೨೬ ಪಿತ್ತವಿದ್ದರೆ ವಿತ್ತ ಸಿಕ್ಕೀತೇ.

೨೦೨೭ ಪಿರಿಯಾದಿ ಮಾಡದ ಹೊರ್ತು ದಾಯಾದಿ ಕೇಳ.

೨೦೨೮ ಪಿಶಾಚ ಬಿಟ್ಟರೂ ನಿಶಾಚರ ಬಿಡ.

೨೦೨೯ ಪಿಸರು ಇದ್ದವನ ಹತ್ತರ ಉಸುರ ಬಾರದು.

೨೦೩೦ ಪಿಸರು ತೆಗದರೂ ಪಿಶಾಚ ಬಿಡುವದಿಲ್ಲ.

೨೦೩೧ ಪಿಸುಣನ ದ್ರವ್ಯ ಲೋಭಿ ಬಯಸಿದ ಹಾಗೆ.

೨೦೩೨ ಪೀಠ ಸಿಕ್ಕಿದರೂ ಕಾಟಕತನ ಬಿಟ್ಟಾನೇ.

೨೦೩೩ ಪೀಠ ಶುದ್ಧವಿದ್ದರೆ ಶಿಕರ ಶುದ್ಧವಿದ್ದೀತು.

೨೦೩೪ ಪೀಠಿಗೆ ತಿಳಿಯದವ ಮಂಗಲ ಪರಿಯಂತರ ಹೇಳ್ಯಾನೇ.
೨೦೩೫ ಪೀಪೆ ಪಟ್ಟರೂ ಆಡೋದು ಬಿಡ.
೨೦೩೬ ಪೀಡೆ ಪಟ್ಟರೂ ಮೂಢತ್ವ ಹೋದೀತೇ.
೨೦೩೭ ಪೀತಾಂಬರ ಉಟ್ಟರೂ ಕೋತಂಬರಿ ಮಾರೋದು ಬಿಡಲಿಲ್ಲ.
೨೦೩೮ ಪೀಳಿಗೆ ಗೊತ್ತಿಲ್ಲದಿದ್ದರೆ ಹೀಳಿಗೆ ಮುಚ್ಚ ಕೂಡದೇ.
೨೦೩೯ ಪೀಳಿಗೆ ತಿಳಿಯದಿದ್ದರೆ ಹೋಳಿಗೆ ತಿನ್ನಲಿಕ್ಕೆ ಯೇನು.
೨೦೪೦ ಪುಂಡತನ ಮಾಡಿದವ ಭಂಡಾಟ ಬಿಟ್ಟಾನೇ.
೨೦೪೧ ಪುಂಡನಾದವ ಉಂಡನಕ ಹೋಗ.
೨೦೪೨ ಪುಕ್ಕನಾದರೂ ಮುಕ್ಕೋಕೆ ಕಡಿಮೆ ಇಲ್ಲ.
೨೦೪೩ ಪುಕ್ಕನಾದವ ಮಿಕ್ಕಿ ಹೋದಾನೇ.
೨೦೪೪ ಪುಗಟೆಗೆ ಸಿಕ್ಕಿದ್ದು ಬರಿದೆ ಹೋಯಿತು.
೨೦೪೫ ಪುಟಗೋಸಿಕ್ಕಿಂತ ದರಿದ್ರವಿಲ್ಲ, ಮರಣಕ್ಕಿಂತ ಶಿಕ್ಷೆ ಇಲ್ಲ.
೨೦೪೬ ಪುಟವಿಕ್ಕಿದರೂ ಸಟೆ ಬಿಡಲಿಲ್ಲ.
೨೦೪೭ ಪುಟ್ಟನಾದರೂ ಧಿಟ್ಟನಾಗಿದ್ಧಾನೆ.
೨೦೪೮ ಪುಟ್ಟಿ ತುಂಬಿದರೂ ಹೊಟ್ಟೆ ತುಂಬಲಿಲ್ಲ.
೨೦೪೯ ಪುಣುಗು ತೆಗಿಯಲಿಕ್ಕೆ ಜುಣುಗು ಬಿಟ್ಟರೆ ಆದೀತೇ.
೨೦೫೦ ಪುಣುಗು ಪರಿಮಳಿಸಿದರೂ ಹೆಣಗೋದು ಬಿಡಲಿಲ್ಲ.
೨೦೫೧ ಪುಣ್ಣಿಮೆ ಆದರೆ ಹುಣ್ಣಿಮೆ ಬಿಡ ಬಾರದೇ.
೨೦೫೨ ಪುಣ್ಯಕ್ಕೆ ಫಲವೇ ಸಾಕ್ಷಿ, ಭಾವಿಗೆ ಜಲವೇ ಸಾಕ್ಷಿ.
೨೦೫೩ ಪುಣ್ಯಕ್ಕೆ ಹೋದರೆ ಪಾಪ ಬಂತು.
೨೦೫೪ ಪುಣ್ಯ ಮಾಡದೆ ಕೆಟ್ಟ ಹೆಣ್ಣು ಹುಟ್ಟಿ ಕೆಟ್ಟ.
೨೦೫೫ ಪುಣ್ಯವಂತ ಹಾಡಿದ್ದೇ ರಾಗ, ವೈದ್ಯ ಹೇಳಿದ್ದೇ ರೋಗ.
೨೦೫೬ ಪುಣ್ಯವಿಲ್ಲದೆ ಕಣ್ಣು ಕಿತ್ತಿ ಕೊಂಡರೆ ಹೆಣ್ಣು ಸಿಕ್ಕೀತೇ.
೨೦೫೭ ಪುಣ್ಯವೆಂಬುದು ಸಣ್ಣದೇ ಹಣ್ಣು ತಿಂದ ಹಾಗಲ್ಲ.

೨೦೫೮ ಪುತ್ರನಾದರೆ ಅವಸಾನದಲ್ಲಿ ಹತ್ತರ ಇದ್ದಾನು.
೨೦೫೯ ಪುತ್ರನಿಲ್ಲದವಗೆ ಸಾಕವಿಲ್ಲ.
೨೦೬೦ ಪುತ್ರನಿಲ್ಲದಿದ್ದರೆ ಹೆರಲಿಕ್ಕೆ ಕಡಿಮೆಯೇ.
೨೦೬೧ ಪುತ್ರರಿಲ್ಲದಿದ್ದರೆ ಗೋತ್ರಕ್ಕೆ ಕಡಿಮೆಯೇ.
೨೦೬೨ ಪುತ್ರರಿಲ್ಲದಿದ್ದರೆ ಸತ್ರಕ್ಕೆ ಹೋಗ ಬಾರದೇ.
೨೦೬೩ ಪುತ್ರರಿಲ್ಲದಿದ್ದರೊಂದು ಕಷ್ಟ, ಪುತ್ರರಿದ್ದರೆ ವೊಂಭತ್ತು ಕಷ್ಟ.
೨೦೬೪ ಪುಥಳಿಗಿಂತ ಮೇಲು ಭಂಗಾರವಿಲ್ಲ, ಮಕ್ಕಳಿಗಿಂತ ಮೇಲು ತೊ
೨೦೬೫ ಪುನಸಾ ಹೋದರೆ ಶನೀ ಕಾಟ ತಪ್ಪೀತೇ. [ಗಲು ಇಲ್ಲ.
೨೦೬೬ ಪುರಂದರನಿಗೂ ತೊಂದರೆ ತಪ್ಪಲಿಲ್ಲ.
೨೦೬೭ ಪುರ ಹೋದರೆ ಪರ ಹೋದೀತೇ.
೨೦೬೮ ಪುರಾಣಾ ತಿಳಿದರೂ ಮಾರಣ ಬಿಡಲಿಲ್ಲ.
೨೦೬೯ ಪುರಾಣಾ ತಿಳಿದವನಾದರೆ ಹರಣ ಉಳಿಸಲಿ.
೨೦೭೦ ಪುರಣಾ ತಿಳಿಯದಿದ್ದರೆ ನಾರಾಯಣ ಯೆನ್ನಲಿಕ್ಕೇನು.
೨೦೭೧ ಪುರಾಣಾ ಹೇಳಿದರೆ ಪುಷ್ಪ ಬಿದ್ದಾವೇ.
೨೦೭೨ ಪುರಾಣಾ ಹೇಳಿ ಹೋಗುವಾಗ್ಯೆ ಬಾಗಲು ಮುಚ್ಚಿ ಹೋಗಿ.
೨೦೭೩ ಪುರಾತನದ ಕಥೆ ಕಿರಾತ ಯೇನು ಬಲ್ಲ.
೨೦೭೪ ಪುರುಷನಾದರೆ ಹರುಷ ಬೇಕು.
೨೦೭೫ ಪುರುಷನಿಗೆ ಮರ್ಷ ಸಲ್ಲದು.
೨೦೭೬ ಪುರ್ಕು ಅಂದರೆ ಹರ್ಕು ಮುಚ್ಚೀತೇ.
೨೦೭೭ ಪುಷ್ಯಮಾಸವಾದರೆ ನಸ್ಯ ಹಾಕಿಕೊಳ್ಳ ಬಾರದೇ.
೨೦೭೮ ಪುಷ್ಟಿಯಾದವ ತುಷ್ಟಿ ಇದ್ದಾನು.
೨೦೭೯ ಪುಸ್ತಕ ಅಬದ್ಧವಾದರೆ ನಾಲಿಗೆ ಅಬದ್ಧವೇ.
೨೦೮೦ ಪುಸ್ತಕವಿದ್ದರೆ ಅಕ್ಷರ ತಿಳಿಯದವಗೇನು.
೨೦೮೧ ಪೂಜೆ ಮಾಡಿದರೂ ಹೂಜೆ ಸಜ್ಜು ಆಗಲಿಲ್ಲ.

೨೦೮೨ ಪೂಮಾಲೆ ಇಲ್ಲದಿದ್ದರೆ ರೂಮಾಲೆ ಬೇಡವೋ.

೨೦೮೩ ಪೂರ್ಣವಿದ್ದರೂ ಸ್ವರ್ಣದ ಬಯಕೆ ತೀರದು.

೨೦೮೪ ಪೂರ್ಣವಿಲ್ಲದಿದ್ದರೆ ಹೂರ್ಣ ಮಾಡ ಬಾರದೇ.

೨೦೮೫ ಪೂರ್ವ ತಿಳಿದವ ಗರ್ವಿಯಾದಾನೇ.

೨೦೮೬ ಪೂರ್ವ ಹೇಳಿದರೆ ಹಾರ್ವ ವೋಪ್ಯಾನು.

೨೦೮೭ ಪೂರ್ವಿಕರು ಹೇಳಿದ್ದೇ ಪುರಾಣ, ಊರ್ವಿಕರು ಹೇಳಿದ್ದೇ ಗಾದೆ.

೨೦೮೮ ಪೆಂಗನಾದರೂ ಭಂಗ ಬಿಡದು.

೨೦೮೯ ಪೆಂಡಾರೇರು ಬರುವಾಗೆ ಹೆಂಡರ ಗೊಡವೆ ಯೇನು.

೨೦೯೦ ಪೆಗ್ಗ ಆದರೂ ಅಗ್ಗದಲ್ಲಿ ತಂದ.

೨೦೯೧ ಪೆಟ್ಟಿಗೆ ಕದ್ದ ಕಳ್ಳ ಬೀಗದ ಕೈಗೆ ಬಂದಾನೇ.

೨೦೯೨ ಪೆಟ್ಟಿಗೆ ತುಂಬ ಹಣವಿದ್ದರೂ ಕಟ್ಟಿಗೆ ಹೊರ್ತು ಗತಿ ಇಲ್ಲ.

೨೦೯೩ ಪೆಟ್ಟಿಗೆ ಪೆಟ್ಟು ಆದರೂ ಶಿಟ್ಟು ಬಿಡಲಿಲ್ಲ.

೨೦೯೪ ಪೆಟ್ಟಿಗೆ ಪೆಟ್ಟು, ಕೊಟ್ಟಿಗೆ ತುಪ್ಪ.

೨೦೯೫ ಪೆಟ್ಟು ಕೊಟ್ಟಾಗ್ಯೂ ಹಿಟ್ಟು ಬೇಡೋದು ಬಿಡಲಿಲ್ಲ.

೨೦೯೬ ಪೆಟ್ಟು ತಿಂದವನೂ ಬಲ್ಲ, ಪೆಟ್ಟು ಕೊಟ್ಟವನೂ ಬಲ್ಲ.

೨೦೯೭ ಪೆಟ್ಟು ಬೆನ್ನು ತಿನ್ನುತ್ತದೆ ಹೊಟ್ಟೆ ಅನ್ನ ತಿನ್ನುತ್ತದೆ.

೨೦೯೮ ಪೇಚಾಟದಲ್ಲಿ ಬಿದ್ದರೆ ನೀಚಾಟವೇ ಸರಿ.

೨೦೯೯ ಪೇಟೆಗೆ ಜಟ್ಟಿ, ಪಟ್ಣಕ್ಕೆ ಸೆಟ್ಟಿ.

೨೧೦೦ ಪೇಟೆಯಲ್ಲಿರುವವನಿಗೆ ಬೇಟೆ ಸುದ್ದಿ ಯಾಕೆ.

೨೧೦೧ ಪೈತ್ಯವಾದವನಿಗೆ ಸೈತ್ಯವಾಗದೋ.

೨೧೦೨ ಪೈಸಲುಗೊಂಡ ಮನುಷ್ಯಗೆ ಮೈಸಾಲ ನಂಬರು.

೨೧೦೩ ಪೊಂಜು ಸುಟ್ಟರೂ ಮಂಜು ಹೋಗಲಿಲ್ಲ.

೨೧೦೪ ಪೊಟ್ಟಣ ಕಟ್ಟಿ ಕೊಂಡರೆ ತಟ್ಟನೆ ಹೋಗನೇ.

೨೧೦೫ ಪೊಡವಿಯಲ್ಲಿದ್ದವಗೆ ಅಡವೀ ಗೊಡವೆ ಯಾಕೆ.

೨೧೦೬ ಪೋಕನ ಮಾತು ಕಾಕು, ಸುಳ್ಳನ ಮಾತು ಟೊಳ್ಳು.

೨೧೦೭ ಪೋಕನಿಗೆ ನಾಕ ಸಲ್ಲ, ಮೂಕನಿಗೆ ಸ್ವಪ್ನ ಸಲ್ಲ.

೨೧೦೮ ಪೋರನಿಗೆ ಶೇರಿ ಕೊಂಡು ಹಾರೋ ಕುನ್ನಿ ಸೋತು ಹೋದ.

೨೧೦೯ ಪೋಲಿ ಮಾಡುವವನಿಗೆ ಕೋಳೀ ಮರಿ ಆಗದೇ.

೨೧೧೦ ಪೋಲಿಯವನ ಕೈಯಲ್ಲಿ ಥೈಲಿ ಕೊಟ್ಟರೆ ಖಾಲಿಯಾಗದೇ.

೨೧೧೧ ಪೋಲಿಯವನ ಹೊಲಕ್ಕೆ ಬೇಲಿಯುಂಟೇ.

೨೧೧೨ ಪೋಲೀ ದನಕ್ಕೆ ಹಾಲು ಹೆಚ್ಚು, ಕೂಲೀ ಮುಂಡೆಗೆ ನಾಲಿಗೆ ಹೆಚ್ಚು.

೨೧೧೩ ಪೋಲು ಆದ ವಸ್ತು ಹಾಲಿನ ಹಾಗಿದ್ದರೇನು.

೨೧೧೪ ಪೋಷಣಕ್ಕೆ ಹೋಗಿ ಭೂಷಣ ಕಳಕೊಂಡ.

೨೧೧೫ ಪ್ರಕಟವಾದರೂ ಅಗಡುತನ ಬಿಡಲಿಲ್ಲ.

೨೧೧೬ ಪ್ರಕಾಶವಿಲ್ಲದವ ಆಕಾಶಕ್ಕೆ ಹೋದರೇನು.

೨೧೧೭ ಪ್ರಕೃತಿ ಇಲ್ಲದಿದ್ದರೂ ವಿಕೃತಿ ಬಿಡಲಿಲ್ಲ.

೨೧೧೮ ಪ್ರಖ್ಯಾತಿ ಹೊಂದಿ ಅಪಖ್ಯಾತಿ ಪಟ್ಟ.

೨೧೧೯ ಪ್ರತ್ಯಕ್ಷ ಕಂಡರೂ ಪರಾಮ್ಮರಿಸಿ ನೋಡ ಬೇಕು.

೨೧೨೦ ಪ್ರದಕ್ಷಣೆಗೆ ಹೋಗಿ ಸ್ವದಕ್ಷಣೆ ತಪ್ಪಿತು.

೨೧೨೧ ಪ್ರದಕ್ಷಣೆ ಮಾಡಿದರೂ ದಕ್ಷಿಣ ಯಾತ್ರೆ ತಪ್ಪದು.

೨೧೨೨ ಪ್ರಧಾನಿಯಾದವಗೆ ನಿಧಾನವಿರ ಬೇಕು.

೨೧೨೩ ಪ್ರಪಂಚ ಬಿಟ್ಟರೂ ವಂಚನೆ ಬಿಡ.

೨೧೨೪ ಪ್ರಪಂಚ ಬಿಟ್ಟರೆ ಪಾರಮಾರ್ಥ ಬಿಟ್ಟೀತೇ.

೨೧೨೫ ಪ್ರಪಂಚ ಬಿಡುತ್ತೇನೆಂದು ಪಂಚಮಹಾ ಪಾಪ ಹೊಂದಿ ಕೊಂಡ.

೨೧೨೬ ಪ್ರಮಾಣ ಮಾಡಿದರೂ ಮಾಣಿಕ ಸಿಕ್ಕಲಿಲ್ಲ.

೨೧೨೭ ಪ್ರಮುಖನಾದವನು ವಿಮುಖನಾಗ ಬಾರದು.

೨೧೨೮ ಪ್ರಯಾಸ ಪಟ್ಟವನಿಗೆ ಆಯಾಸವಿಲ್ಲವೇ.

೨೧೨೯ ಪ್ರಯಾಸ ಪಡದೆ ಪ್ರಯಾಗ ಸಿಕ್ಕೀತೇ.

೨೧೩೦ ಪ್ರಯೋಜನಕ್ಕೆ ಬಾರದವ ಪ್ರಸ್ತಕ್ಕೆ ಬಂದಾನೇ.
೨೧೩೧ ಪ್ರವೇಶ ಮಾಡದ ಸ್ಥಳದಲ್ಲಿ ಆವೇಶ ಬಂದರೆ ಶೇರ್‍ಯಾನೇ.
೨೧೩೨ ಪ್ರವೇಶ ಮಾಡಲಾರದವಗೆ ಆವೇಶವಿದ್ದರೇನು.
೨೧೩೩ ಪ್ರಶಸ್ತವಾದ ವಸ್ತುವಿಗೆ ಪ್ರಶ್ನೆ ಕೇಳ ಬೇಕೇ.
೨೧೩೪ ಪ್ರಶ್ನೆ ಕೇಳಿದರೆ ವ್ಯಸನ ಬಿಟ್ಟೀತೇ.
೨೧೩೫ ಪ್ರಸಂಗ ಕೇಳಲಿಕ್ಕೆ ಹೋದಲ್ಲಿ ಬೆಸನವಾದಳು.
೨೧೩೬ ಪ್ರಸಂಗ ಕೇಳಿದರೂ ಅಸಂಗತಿ ಬಿಡಲಿಲ್ಲ.
೨೧೩೭ ಪ್ರಸವ ಕಾಲದಲ್ಲಿ ಪ್ರಸಾದ ಕೇಳಿದ ಹಾಗೆ.
೨೧೩೮ ಪ್ರಸಾದ ಕೇಳಲಿಕ್ಕೆ ಹೋಗಿ ಪ್ರಾಸಾದದಿಂದ ಬಿದ್ದ.
೨೧೩೯ ಪ್ರಸಾದ ಕೇಳಿದರೆ ಪ್ರಾಚೀನ ಹೋದೀತೇ.
೨೧೪೦ ಪ್ರಸಾದವಿದ್ದರೆ ಪರಲೋಕ ಶೇರ್‍ಯಾನೇ.
೨೧೪೧ ಪ್ರಸಿದ್ಧವಾದದ್ದು ನಿಸಿದ್ಧವಾಗದೇ.
೨೧೪೨ ಪ್ರಸ್ತಕ್ಕೆ ಭಕ್ಷ್ಯ, ವೈಷ್ಣವರಿಗೆ ಕಕ್ಷ್ಯ; ನಾರಾಯಣ ಅಂದವಗೆ [ಮೋಕ್ಷ.
೨೧೪೩ ಪ್ರಸ್ತದ ಊಟಕ್ಕೆ ಹೋಗಿ ಸ್ವಸ್ಥವಿಲ್ಲದೆ ಬಿದ್ದ.
೨೧೪೪ ಪ್ರಸ್ತದಲ್ಲಿ ಪ್ರಮಾಣದ ಗೊಡವೆಯೇ.
೨೧೪೫ ಪ್ರಸ್ತಾಪಕ್ಕೆ ಬಾರದ ಗಾದೆ ಪ್ರಸ್ತಕ್ಕೆ ಆಗದ ಖಜ್ಜಾಯ.
೨೧೪೬ ಪ್ರಸ್ತಾಪದಿಂದ ಪ್ರಕಟವಾದ್ದು ಪ್ರಸಾದ ಕೇಳಿದರೆ ನಿತ್ತೀತೇ.
೨೧೪೭ ಪ್ರಳಯಕ್ಕೆ ಹೆದರದವ ಪಾಳ್ಯಕ್ಕೆ ಹೆದರ್‍ಯಾನೇ.
೨೧೪೮ ಪ್ರಾಂತ್ಯ ಶೇರಿದರೂ ಭ್ರಾಂತಿ ಬಿಡಲಿಲ್ಲ.
೨೧೪೯ ಪ್ರಾಣವಿರುವಾಗ್ಯೆ ಕೂಡಿಸಿದ ಹಣ ಹೆಣವಾದ ಮೇಲೆ ಬಂದೀತೇ.
೨೧೫೦ ಪ್ರಾಣಾ ಬಿಟ್ಟರೂ ಮಾನ ಬಿಡ ಬಾರದು.
೨೧೫೧ ಪ್ರಾಣಾ ಹೋಗುವಾಗ್ಯೆ ಕೋಣನ ಯೋಚನೆ ಯೇನು.
೨೧೫೨ ಪ್ರಾಣಾ ಹೋಗುವಾಗ್ಯೆ ಪಾಣಿ ಮೇಲಾಗಿರ ಬೇಕು.
೨೧೫೩ ಪ್ರಾಣಿಗಳ ರಕ್ಷಣೆಗೆಂತ ಗೋಣಿ ಉಟ್ಟರೆ ಆದೀತೇ.

೨೧೫೪ ಪ್ರಾಪ್ತಿ ಇದ್ದರೆ ಗೋಪ್ಯವಾದ್ದು ಸಿಕ್ಕೀತು.
೨೧೫೫ ಪ್ರಾಯ ಹೆಚ್ಚಾದರೂ ಬಾಯಿ ಚಂದಾಗಿರ ಬೇಕು.
೨೧೫೬ ಪ್ರಾಯ ಹೋದರೂ ಪ್ರಯಾಸ ಬಿಡದು.
೨೧೫೭ ಪ್ರಾಯಸ್ಥನಾದರೂ ಪ್ರಾಚೀನ ಬಿಡಲಿಲ್ಲ.
೨೧೫೮ ಪ್ರಾಯಸ್ಥನಾದವ ನ್ಯಾಯಸ್ಥನಾಗಿರ ಬೇಕು.
೨೧೫೯ ಪ್ರಾರ್ಥನೆ ಮಾಡಿದರೆ ಸಿಕ್ಕದ್ದು ಕೀರ್ತನೆ ಹೇಳಿದರೆ ಸಿಕ್ಕೀತೇ.
೨೧೬೦ ಪ್ರೀತಿಯಿಂದ ನೀತಿ ಹುಟ್ಟುವದು, ಊತಿಯಿಂದ ಗಜ್ಜಿ ಹುಟ್ಟುವದು.
೨೧೬೧ ಪ್ರೀತಿ ಇದ್ದರೂ ನೀತಿ ಬಿಡ ಬಾರದು.
೨೧೬೨ ಪ್ರೀತಿ ಇದ್ದರೂ ಭೀತಿ ಇರ ಬೇಕು.
೨೧೬೩ ಪ್ರೇತಕ್ಕೆ ಹೆದರುವವ ಭೂತಕ್ಕೆ ಹೆದರನೇ.
೨೧೬೪ ಪ್ರೇತದ ಭೀತಿ ಹೋದರೂ ನಾತದ ಭೀತಿ ಹೋಗಲಿಲ್ಲ.
೨೧೬೫ ಪ್ರೇಮದಿಂದ ಹೇಮ ಕೂಡಿಸಿ ಹೋಮಕ್ಕೆ ತಂಟೆ ತೀರಿಸಿದ.
೨೧೬೬ ಪ್ರೋಕ್ಷಣೆ ಮಾಡಿದರೆ ಪ್ರಹುಡನಾದಾನೇ.
೨೧೬೭ ಫಕ್ಕನೆ ಹೇಳಿದ ಕೆಲಸ ಘುಕ್ಕನೆ ಮಾಡ ಬೇಕು.
೨೧೬೮ ಫಟಿಂಗತನದಿಂದ ಘುಟ್ಟಿಗತನ ಕಳಕೊಂಡ.
೨೧೬೯ ಫಲಕ್ಕೆ ತಕ್ಕ ಬೀಜ, ನೆಲಕ್ಕೆ ತಕ್ಕ ನೀರು.
೨೧೭೦ ಫಲವಿದ್ದ ಬಳ್ಳೀಲಿ ಪಾರುಪತ್ಯ ಚಂದ.
೨೧೭೧ ಫಲವಿದ್ದಲ್ಲಿ ಪರದಾಟವಾದರೂ ಲೇಸು.
೨೧೭೨ ಫಲವಿಲ್ಲದ ಮರ ಹೊಲದಲ್ಲಿದ್ದರೇನು.
೨೧೭೩ ಫಲಾ ನೋಡದೆ ಕೆಟ್ಟಿತು, ಹೊಲಾ ಹೂಡದೆ ಕೆಟ್ಟಿತು.
೨೧೭೪ ಫಲಾ ನೋಡಿದರೆ ಬಾಯಾರಿಕೆ ನಿಲ್ತೀತೇ.
೨೧೭೫ ಫಲಾ ಬಿತ್ತಿ ಪಾಪಾ ಕಳೆ.
೨೧೭೬ ಫಿರಂಗೀ ಗುಣ ಫರಂಗಿ ಅರಿಯನೇ.
೨೧೭೭ ಬಂಕಾಪುರಕ್ಕೆ ಹೋದರೆ ಡೊಂಕು ಬಿಟ್ಟೀತೇ.

೨೧೭೮ ಬಂಗಾಳಕ್ಕೆ ಹೋದರೂ ಗೌಡ ಬಂಗಾಳಿ ಬಿಡಲಿಲ್ಲ.

೨೧೭೯ ಬಂಜೆಯು ಮಗನ ಜಾತಕ ತೋರಿಸ ಬೇಕೆಂತ ಹೇಳಿದ ಹಾಗೆ.

೨೧೮೦ ಬಂಜೆಯಲ್ಲಿ ತೊಟ್ಲು ಇಲ್ಲ, ಸಂಜೆಯಲ್ಲಿ ಸೂರ್ಯನಿಲ್ಲ.

೨೧೮೧ ಬಂಟರಲ್ಲಿ ತಂಟೆ ಹೆಚ್ಚು, ನಂಟರಲ್ಲಿ ಗರ್ವ ಹೆಚ್ಚು.

೨೧೮೨ ಬಂಟನಾಳ ಸುಂಕಿಯ ಪಾರುಪತ್ಯದ ಹಾಗೆ.

೨೧೮೩ ಬಂಡನಿಗೆ ಪಿಂಡದ ಯೋಚನೆಯೇ.

೨೧೮೪ ಬಂಡಿ ಬಂಡಾಟ ಹೇರು ಹೆಟ್ಯಾಟ ತಲೆ ಮೊಟ್ಟೆ ಪರಮ ಸುಖ.

೨೧೮೫ ಬಂಡೆ ವೊಡದು ದಿಂಡೆಯನ್ನ ಯೆಬ್ಬಿಸಿದ.

೨೧೮೬ ಬಂಡೆ ವೊಡಿಯ ಬಹುದು ರಂಡೇ ಮನಸು ವೊಡಿಯ ಕೂಡದು.

೨೧೮೭ ಬಂಡೆಯ ಮೇಲೆ ಕೂತರೆ ಬಣ್ಣ ಬಂದೀತೇ.

೨೧೮೮ ಬಂದದ್ದು ಬರಲಿ ಭಂಡಿ ಹಳ್ಳಿ ಸುಂಕ. [ದೀತೇ.

೨೧೮೯ ಬಂದ ಬಂದವರು ನಿಂದಿಸಿದರೆ ಗಂಡ ಸತ್ತ ದುಃಖ ಬಿಟ್ಟು ಹೋ

೨೧೯೦ ಬಂಬು ಹೊರುವವನ ಸಂಗಡ ಹಂಬಲಿಸಿದರೆ ಇಂಬು ಸಿಕ್ಕೀತೇ.

೨೧೯೧ ಬಕನ ಬಾರಿ, ಮಗನ ಮದಿವೆ.

೨೧೯೨ ಬಗಳೋನು ಹೊಗಳನು ಹೊಗಳೋನು ಬಗಳನು.

೨೧೯೩ ಬಗ್ಗಿದವನಿಗೆ ವೊಂದು ಗುದ್ದು ಹೆಚ್ಚು.

೨೧೯೪ ಬಗೆಬಗೇ ಭಕ್ಷ್ಯ ಬಯಸಿದರೆ ಬಂದೀತೇ.

೨೧೯೫ ಬಚ್ಚಲಿಗೆ ಬಗೆ ಇಲ್ಲದವ ಮಾಳಿಗೆ ಕಟ್ಟ್ಯಾನೇ.

೨೧೯೬ ಬಜ್ಜಿಗೆ ಮಜ್ಜಿಗಿಲ್ಲ, ಅಜ್ಜಿಗೆ ಯೆಲ್ಲಿ ಮೊಸರು.

೨೧೯೭ ಬಟ್ಟೆ ತಲೆಯವನಾದರೆ ಹೆಟ್ಟಿಗೆ ಹೊತ್ತಾನೇ.

೨೧೯೮ ಬಟ್ಟೆಮೊಗ ಬಟ್ಲು ಆದೀತೇ.

೨೧೯೯ ಬಟ್ಟೆಯಿಂದ ಆಗುವಂತಾದ್ದು ಬೊಟ್ಟಿನಿಂದ ಆದೀತೇ.

೨೨೦೦ ಬಟ್ಟೆ ಸುಟ್ಟು ಹೋಯಿತೆಂದರೆ ಸೆಟ್ಟಿ ಬಿಟ್ಟಾನೇ.

೨೨೦೧ ಬಟ್ಟೆ ಇಲ್ಲದವಗೆ ಪಟ್ಟೆ, ಊಟಕ್ಕಿಲ್ಲದವಗೆ ಜೀರಿಗೆಸಾಲೆ.

೨೨೦೨ ಬಟ್ಟೆಗೇಡು ಬರಿಗೇಡು ಬಡ್ಡೀ ಮಕ್ಕಳಿಗೆ ಕೊಟ್ಟ ಹಾಗೆ.
೨೨೦೩ ಬಟ್ಟೆ ಮಾಸಿದರೆ ಅಗಸಗೆ, ನಾಲಿಗೆ ಮಾಸಿದರೆ ಕೆರಕ್ಕೆ.
೨೨೦೪ ಬಡ ಯೆತ್ತಿಗೆ ದರೇ ಮೇಲಣ ಹುಲ್ಲೇ.
೨೨೦೫ ಬಡದಾಸನಿಗೆ ನಾಮವೇ ಆಧಾರ.
೨೨೦೬ ಬಡವಗೆ ಆಶೆ ಹೇಳ ಬೇಡ, ಬಲ್ಲಿದವಗೆ ಭಾಷೆ ಹೇಳ ಬೇಡ.
೨೨೦೭ ಬಡವಗೆ ಸಾಡ ಮಾತ್ಯಾಕೆ.
೨೨೦೮ ಬಡವಗ್ಯಾಕೆ ಸಿರಿವಂತನ ಹೆಣ್ಣು.
೨೨೦೯ ಬಡವನ ಬಿನ್ನಹ ಯೆಡೆಲೆ ಹೋಯಿತು.
೨೨೧೦ ಬಡವನ ಶಿಟ್ಟು ದವಡೆ ಮೂಲ.
೨೨೧೧ ಬಡವನ ಸಂಕಟ ಮನೆ ಯೆಲ್ಲ, ಅರಸನ ಸಂಕಟ ರಾಜ್ಯವೆಲ್ಲ.
೨೨೧೨ ಬಡವನ ಹೆಂಡತಿ ಯೆಲ್ಲರ ಅತ್ತಿಗೆ.
೨೨೧೩ ಬಡವ ನೀ ಮಡಗಿದ ಹಾಗಿರು.
೨೨೧೪ ಬಡವ ಯಾಕಿದ್ಧಾನೆ ಕಡೆ ಕೇರಿಲಿ.
೨೨೧೫ ಬಡಿದಾಡುವವರ ಹತ್ತರ ಬಡಿವಾರವೇ.
೨೨೧೬ ಬಡಿಯೋನ ಹತ್ತರ ಹೋದರೆ ಬಡತನ ಹೋದೀತೇ.
೨೨೧೭ ಬಡಿವಾರದವನ ಸಂಗಡ ಹೋಗಿ ನಡುದಾರಿಲಿ ಬಿದ್ದ.
೨೨೧೮ ಬಡ್ಡಿಗೆ ಕೊಟ್ಟವ ಬೊಡ್ಡಿ ಮಗ.
೨೨೧೯ ಬಡ್ಡಿಗ್ಯಾತಕ್ಕೆ ಬದುಕಿನ ಯೋಚನೆ.
೨೨೨೦ ಬಡ್ಡೀ ಬಾಯಿಗೆ ಅಂಜಿಯಾ ದೊಡ್ಡೆತ್ತಿನ ಕೋಡಿಗೆ ಅಂಜಿಯಾ.
೨೨೨೧ ಬಣಜಿಗ ಕೂಡಿ ಕೆಟ್ಟ, ದೊಂಬ ಅಗಲಿ ಕೆಟ್ಟ.
೨೨೨೨ ಬಣ್ಣದಲ್ಲಿ ಬರದರೂ ಕಣ್ಣು ಚಂದಾಗಿರ ಬೇಕು.
೨೨೨೩ ಬತ್ತಲೆ ಇದ್ದವಗೆ ಯೆತ್ತಲೂ ಭಯವಿಲ್ಲ.
೨೨೨೪ ಬತ್ತಿದ ಕೆರೇಲಿ ಬದನೆ ಹಾಕಿದರೆ ಕದನಕ್ಕೆ ಕಾರಣ.
೨೨೨೫ ಬತ್ತಿ ನೂಕಲಾರದ ಬಂಟ ದಳನಡಿಸ್ಯಾನೇ.

೨೨೨೬ ಬದಕು ಆಳದೆ ಹೋಯಿತು, ಬಾಳು ನೋಡದೆ ಹೋಯಿತು.

೨೨೨೭ ಬದನೇಕಾಯಿಯಾ ಬಜ್ಜಿ ಮೈಯಲ್ಲ ಗಜ್ಜಿ.

೨೨೨೮ ಬದಲು ಮಾತಾಡಿದರೂ ತೊದಲು ಹೋಗಲಿಲ್ಲ.

೨೨೨೯ ಬದಲು ಮಾತಾಡುವವನು ಬೆದರಿಸಿದರೆ ಬಿಟ್ಟಾನೇ.

೨೨೩೦ ಬನವತಿ ಮಾರೆಮ್ಮನ ನಂಬಿದ ಹಾಗೆ.

೨೨೩೧ ಬನವಾಸಿಗೆ ಹೋದರೂ ಬರಗಾಲ ತಪ್ಪಲಿಲ್ಲ.

೨೨೩೨ ಬನ್ನಿ ಯೆಂದರೆ ಪನ್ನಿ ಹೆಚ್ಚು.

೨೨೩೩ ಬಯಕೆ ಆದ್ದು ಬಾರಿಸಿದರೆ ಸಿಕ್ಕೀತು.

೨೨೩೪ ಬಯಕೆ ಕೊಟ್ಟರೂ ಬೈಸಿ ಕೊಂಬದು ತಪ್ಪಲಿಲ್ಲ.

೨೨೩೫ ಬಯಕೆ ಹಾಕಿದರೂ ಬಯುಸುವದು ತಪ್ಪಲಿಲ್ಲ.

೨೨೩೬ ಬಯಸಿ ಬಯಸಿ ಬಾಳು ಹೊಕ್ಕರೆ ಬೈಯ್ಯೋ ಗಂಡ ಬಂದ ಹಾಗೆ.

೨೨೩೭ ಬರಗದ ಅನ್ನ ತಿನ್ನುವವ ಹೂರಿಗೆ ಬಯಸಿದ ಹಾಗೆ.

೨೨೩೮ ಬರಡು ಯೆಮ್ಮೆಗೆ ಕರಡು ಹುಲ್ಲು.

೨೨೩೯ ಬರದು ತಿಳಿಯದ ಲೆಕ್ಕ ಕಡೆಗೆ ದುಃಖ.

೨೨೪೦ ಬರ ಬಂದ ಕಾಲಕ್ಕೆ ಮಗ ಉಂಬೋಕೆ ಕಲಿತ.

೨೨೪೧ ಬರಹದಲ್ಲಿದ್ದ ಕರಿ ಮರೀ ಹಾಕೀತೇ.

೨೨೪೨ ಬರಹ ಬಲ್ಲವನಾದರೂ ಶರಹರಿಕೆ ಇರ ಬೇಕು.

೨೨೪೩ ಬರೀ ಗುಲ್ಲು ನಿದ್ರೆಗೇಡು.

೨೨೪೪ ಬರೀ ಗೈಮಿ ಮೊಳ ಹಾಕಿದ ಹಾಗೆ.

೨೨೪೫ ಬರೀ ಮಾತಿಗೆ ಮರುಳಾದರೆ ಬರ ತಪ್ಪೀತೇ.

೨೨೪೬ ಬರೀ ಮಾತಿನವನಿಗೆ ನರೆ ಇದ್ದರೇನು.

೨೨೪೭ ಬರೀ ಮಾತಿನವ ಹೊರೆ ಹೊತ್ತಾನೇ.

೨೨೪೮ ಬರುತ್ತಾ ಬರುತ್ತಾ ರಾಯನ ಕುದುರೆ ಕತ್ತೆ ಆಯಿತು.

೨೨೪೯ ಬರುವವರ ಸಂಗಡ ಬಂದರೂ ಬರಗಾಲ ತಪ್ಪಲಿಲ್ಲ.

೨೨೫೦ ಬರುವಾಗ ನರಿಯ ಕಂಡರೆ ಕರಕರೆ ಇಲ್ಲ.
೨೨೫೧ ಬರುವಾಗ ಹುಲಿಯ ಹಾಗೆ, ಹೋಗುವಾಗ ಇಲಿಯ ಹಾಗೆ.
೨೨೫೨ ಬರೆಯದ ಕೈ, ಕರೆಯದ ಬಾಯಿ.
೨೨೫೩ ಬರೆಯಲಾರದವ ಕುರಿ ಕಾಯುವನಿಗಿಂತ ಕಡೆ.
೨೨೫೪ ಬರೆಯಲಿಕ್ಕೆ ಹ್ಯಾಗೂ ಬರೆಯ ಬಹುದು, ಸುಡೋದು ಹ್ಯಾಗೆ.
೨೨೫೫ ಬರೆಯುವವನ ಸಂಗಡ ದ್ವೇಷ, ದಾಯಾದಿಯ ಸಂಗಡ ಸ್ನೇಹ.
೨೨೫೬ ಬಲದಲ್ಲಿ ವಾಲಿ ಮೇಲು, ಛಲದಲ್ಲಿ ರಾಮ ಮೇಲು.
೨೨೫೭ ಬಲವಿದ್ದದ್ದು ಲಯವಾದ ಮೇಲೆ ಭಯ ಪಡುವದೇ ಸರಿ.
೨೨೫೮ ಬಲವಿದ್ದರೂ ಕುಲಾ ನೋಡ ಬೇಕು.
೨೨೫೯ ಬಲವಿದ್ದರೆ ನೆಲ.
೨೨೬೦ ಬಲವಿದ್ದಷ್ಟೇ ಹೊತ್ತರೆ ನೆಲಕ್ಕೆ ಯಾಕೆ ಬೀಳುವನು.
೨೨೬೧ ಬಲಾತ್ಕಾರದಿಂದ ತಂದ ನಾಯಿ ಮೊಲನ ಹಿಡದೀತೇ.
೨೨೬೨ ಬಲಾತ್ಕಾರವಿದ್ದರೂ ಚಮತ್ಕಾರ ಇರ ಬೇಕು.
೨೨೬೩ ಬಳಿ ಕೊಡದವ ಛಲಕ್ಕೆ ಬಂದಾನೇ.
೨೨೬೪ ಬಳಿ ತಿಂಬುವವನ ಕೂಡೆ ಕುಲಾ ಕೇಳೋದೇನು.
೨೨೬೫ ಬಳಿ ದಾನ ಕೊಟ್ಟರೂ ಸಮಾಧಾನ ಬೇಕು.
೨೨೬೬ ಬಳಿ ಮುದ್ರೆ ಕೊಟ್ಟರೂ ಸುಳಿಗೆ ತಪ್ಪಲಿಲ್ಲ.
೨೨೬೭ ಬಳಿ ಹಾಕುವದಕ್ಕೆ ಬಕ್ಷೀಸಾಹೇಬರ ಅಪ್ಪಣೆ ಬೇಕೇ.
೨೨೬೮ ಬಳೆಗೆ ಸಿಕ್ಕದ್ದು ಕೋಳಿಗೆ ಸಿಕ್ಕೀತೇ.
೨೨೬೯ ಬಳೆಗೆ ಸಿಕ್ಕದ ಪಕ್ಷಿ, ಕೊಳೆಗೆ ಸಿಕ್ಕದ ಇರುವೆ.
೨೨೭೦ ಬಳೆನೈದ ಮರಕಾಲ ಬಟ್ಟೆ ನೈದಾನೇ.
೨೨೭೧ ಬಲ್ಲವನ ಗುಣ ಮಲ್ಲಿಗೇ ಹಾಗೆ.
೨೨೭೨ ಬಲ್ಲವನೇ ಬಲ್ಲ ಬೆಲ್ಲದ ಸವಿ. [ಯಿತು.
೨೨೭೩ ಬಲ್ಲಿದವನ ಹಗೇವು ತೆಗಿಯೋ ಹೊತ್ತಿಗೆ ಬಡವನ ಪ್ರಾಣ ಹೋ

೨೨೭೪ ಬಸವನ ಹಿಂದೆ ಬಾಲಿ. [ಅಂದ.
೨೨೭೫ ಬಸವಾ ಯೆಂದರೆ ಪಾಪಂ ಅಂದರೆ ಸೊಸೆಗೆ ಮಜ್ಜಿಗೆ ನೀರು ತಾ
೨೨೭೬ ಬಸಳೇ ಸಪ್ಪು ಬಸವಗ್ಯಾಕೆ.
೨೨೭೭ ಬಸರು ಬಂದಾಕ್ಷಣ ಹಸುರು ಶಾತೆ ಸಿಕ್ಕೀತೇ.
೨೨೭೮ ಬಸೇ ವಾಸನೆಯಲ್ಲಿ ಸೊಸೆಯ ಹ್ಯಾಗೆ ಕರತರೋದು.
೨೨೭೯ ಬಹಿರಂಗವಾದರೆ ಬಹಿಷ್ಕರಿಸ್ಯಾರು.
೨೨೮೦ ಬಹಿರ್ದೇಶಕ್ಕೆ ಹೋದರೂ ತಗಣೇ ಕಾಟ ಬಿಡಲಿಲ್ಲ.
೨೨೮೧ ಬಹಿಷ್ಕಾರದವನಿಗೆ ನಮಸ್ಕಾರವೇ.
೨೨೮೨ ಬಳಕೆ ಇಲ್ಲದಲ್ಲಿ ಬಾಳ ಬಹುದು, ಥಳಿ ಕಾಟ ಸೈರಿಸ ಕೂಡದು.
೨೨೮೩ ಬಳಿದ ಯೆಣ್ಣೆ ಬಚ್ಚಲಿಗೆ.
೨೨೮೪ ಬಳೆಗಾರನ ಅಂಗಡೀಲಿ ಬಾಳೇಹಣ್ಣು ಸಿಕ್ಕೀತೇ.
೨೨೮೫ ಬಳ್ಳಿ ಹಿಡಿದು ಕಾಯಿ ಕೊಯ್ಯ ಬೇಕು.
೨೨೮೬ ಬಾಗಲು ಮುರಿದು ಹೊಕ್ಕುವವನಿಗೆ ಬೀಗದಕೈ ಯಾಕೆ.
೨೨೮೭ ಭಾಗಿದರೂ ಬೀಗೋದು ತಪ್ಪಲಿಲ್ಲ.
೨೨೮೮ ಬಾಚಣಿಗೆಯಿಂದ ಬಾಚದವಳು ಬಾಚಿಯಿಂದ ಬಾಚ್ಯಾಳೇ.
೨೨೮೯ ಬಾಡಿಗೇ ಮನೆ, ಕೂಡಿಕೆ ನೆಂಟರು.
೨೨೯೦ ಬಾಡಿದ ಹೂ ನಾಡಿನವರಿಗ್ಯಾಕೆ.
೨೨೯೧ ಬಾಣದ ಗುರಿ ನೋಣದ ಮೇಲೆಯೇ.
೨೨೯೨ ಬಾಣವಿದ್ದರೂ ತ್ರಾಣವಿರ ಬೇಕು.
೨೨೯೩ ಬಾಣವಿಲ್ಲವೆಂದು ಗೋಣ ಕೊಯ್ದರೆ ಆದೀತೇ.
೨೨೯೪ ಬಾಣಸಿಗನಾದರೆ ಹುಣಿಸೆ ಇಲ್ಲದೆ ಅಟ್ಟ್ಯಾನೇ.
೨೨೯೫ ಬಾತವರು ಬದುಕುವದಿಲ್ಲ, ಸೀತವರು ಸಾಯುವದಿಲ್ಲ.
೨೨೯೬ ಬಾತಿದವನಿಗೆ ಹೂಸಿದಷ್ಟು ವಾಸಿ.
೨೨೯೭ ಬಾದಿ ಇಲ್ಲದ ಮನುಷ್ಯ ಬೂದೀ ಸಮಾನ.

೨೨೯೮ ಬಾಧಕ ಬರುವಾಗ್ಯೆ ಸಾಧಕ ಯೇನು.

೨೨೯೯ ಬಾಧೆ ಪಡುವ ಬಾಳಿಗಿಂತ ಬಕನ ಬಾಯಿಗೆ ಬೀಳೋದುತ್ತಮ.

೨೩೦೦ ಬಾಧ್ಯತೆಗೆ ಬಾಧ್ಯನಾದರೆ ಚೋದ್ಯವೇನು.

೨೩೦೧ ಬಾಧ್ಯನಾದರೂ ಸ್ವಾಧಿನ ಬರಲಿಲ್ಲ.

೨೩೦೨ ಬಾಯಿಂದ ಕೆಟ್ಟ ನಾಯಿಂದ ಮುರುವ.

೨೩೦೩ ಬಾಯಿಂದ ಬಂತು ಭಗಂಧರ.

೨೩೦೪ ಬಾಯಿಂದ ಹೇಳಿದ್ದು ಘೂಳಿಗೆ ಹೋಯಿತು.

೨೩೦೫ ಬಾಯಿದ್ದರೆ ಮಗ ಬದುಕ್ಯಾನು.

೨೩೦೬ ಬಾಯಿಯುಳ್ಳವನಾದರೆ ಬರದಲ್ಯಾದರೂ ಬದುಕ್ಯಾನು.

೨೩೦೭ ಬಾರದ ಬರಹ ಹರದರಲ್ಲಿ ಸಿಕ್ಕೀತೇ.

೨೩೦೮ ಬಾರಿನವರಿಗೆ ಬೇರಿನ ಯೋಚನೆ ಯಾಕೆ.

೨೩೦೯ ಬಾರಿ ಬಾರಿ ಬಂದವರು ಹಾರಿ ಹಾರಿ ಹೋಗರೇ.

೨೩೧೦ ಬಾರು ಬಿಗಿದರೆ ಮದ್ದಳೆ, ನಾರಿ ಇದ್ದರೆ ಶೋಭನ.

೨೩೧೧ ಬಾಲಕನಿಗೆ ಅಳೋದೇ ಬಲ, ಇಲ್ಲದವನಿಗೆ ಅರಸೇ ಬಲ.

೨೩೧೨ ಬಾಲವಿದ್ದರೆ ತನ್ನ ಹಾಳಿತಕ್ಕೆ ಬೀಸಿಕೊಳ್ಳುತ್ತದೆ.

೨೩೧೩ ಬಾಲ ಸನ್ಯಾಸಿ ಕೆಟ್ಟರೆ ಖೂಳ ನಾಯಿಗಿಂತ ಕಡೆ.

೨೩೧೪ ಬಾಲ ಸನ್ಯಾಸಿಗೆ ಹಾಳು ಹರಟೆ ಯಾಕೆ.

೨೩೧೫ ಬಾಲ ಹುಟ್ಟಿದರೂ ಹಾಲಿಗೆ ಬಗೆ ಇಲ್ಲ.

೨೩೧೬ ಬಾವು ಯೆದ್ದರೆ ಬಡಕೊಂಡರೆ ಹೋದೀತೇ.

೨೩೧೭ ಬಾಳಿ ಬದುಕಿದರೆ ಅಕ್ಕ ತಂಗಿ, ಕೆಟ್ಟರೆ ಸ್ನೇಹಿತ.

೨೩೧೮ ಬಾಳು ತಪ್ಪಿದ ಬಳಿಕ ಬಳ್ಳೇ ಯೋಚನೆ ಯಾಕೆ.

೨೩೧೯ ಬಾಳುವ ಮನೆಗೆ ಬೊಗಳುವ ನಾಯಿ.

೨೩೨೦ ಬಾಳುವವನಿಗೆ ವೊಂದು ಮಾತು, ಬಾಳೆಗೊಂದು ಗೊನೆ.

೨೩೨೧ ಬಾಳುವವನಿಗೆ ಹಾಳೂರ ಸುದ್ದಿ ಯಾಕೆ.

೨೩೨೨ ಬಾಳುವವರ ಮುಂದೆ ಬೋಳುಮುಂಡೆ ಬೈದುಕೊಂಡು ಅತ್ತ

೨೩೨೩ ಬಾಳೆಗೆ ಕಡದು, ಸೂಳೆಗೆ ಬೆಡಗು. [ಹಾಗೆ.

೨೩೨೪ ಬಾಳೆಗೆ ಕಾಳಿಯಾದರೇನು ಬೋಳಿಯಾದರೇನು ನೀರು ಹೊಯಿ

೨೩೨೫ ಬಾಳೇ ವೊಳಗೆ ಶೀಗೆ ಇದ್ದ ಹಾಗೆ. [ದರೆ ಸರಿ.

೨೩೨೬ ಬಾಳೇ ಗಿಡ ನಟ್ಟರೆ ಹಾಳು ಹುಲ್ಲು ಆದೀತೇ.

೨೩೨೭ ಬಾಳೇ ತೋಟಕ್ಕೆ ಆನೆ ಬಂದ ಹಾಗೆ.

೨೩೨೮ ಬಾಳೆ ಹಣ್ಣಿಗೆ ಕರಗಸವ್ಯಾಕೆ. [ಬೇಕೇ.

೨೩೨೯ ಬಾಳೇ ಹಣ್ಣು ತಿನ್ನ ಬೇಕಾದರೆ ಬೋಳಪ್ಪನಾಯ್ಕನ ಅಪ್ಪಣೆ

೨೩೩೦ ಬಾಳೇ ಹಣ್ಣು ತಿನ್ನುವ ಪರದೇಶಿ ಸಿಪ್ಪೆ ಈಚೆಗೆ ಬಿಸಾಡು ಅಂದ.

೨೩೩೧ ಬಾಳೇ ಹಣ್ಣು ಬಣ್ಣಕ್ಕೆ ಬಂದೀತೇ.

೨೩೩೨ ಬಿಂಕ ಮಾಡಿದರೆ ಡೊಂಕು ಹೋದೀತೇ.

೨೩೩೩ ಬಿಂಗಿಗೆ ಬದಲಾಗಿ ಹಿಂಗು ಹಚ್ಚಿದಂತೆ.

೨೩೩೪ ಬಿಂದಿಗೆ ವೊಡದರೆ ಹಂದಿಗೆ ನೀರು ಯೆಲ್ಲಿ.

೨೩೩೫ ಬಿಕ್ಕಿ ಬಿಕ್ಕಿ ಅತ್ತರೆ ಬೀಸುವ ಕಲ್ಲು ತಿರುಗೀತೇ.

೨೪೩೬ ಬಿಚ್ಚಿ ಹೇಳಿದರೂ ಹುಚ್ಚು ಹೋಗದು.

೨೩೩೭ ಬಿಟ್ಟ ಮನೆಗೆ ಸುಟ್ಟ ವಕ್ಕಲು.

೨೩೩೮ ಬಿಟ್ಟ ಸಾಲ ಕುಟ್ಟಿಕೊಂಡರೆ ಬಂದೀತೇ.

೨೩೩೯ ಬಿಟ್ಟಿ ಆಳು ಆದರೆ ಹಟ್ಟಿ ಕಟ್ಟ ಬಾರದೇ.

೨೩೪೦ ಬಿಟ್ಟೀ ಊಟ ಶಿಕ್ಕಿದರೆ ಕಟ್ಟಿ ಕಟ್ಟಿ ಉಂಡಾನು.

೨೩೪೧ ಬಿಡದ ಮನೆಗೆ ನುಡಿದದ್ದೇ ಗುರ್ತು.

೨೩೨೪ ಬಿಡಾರ ಇರುವವನಿಗೆ ನಡುಮಧ್ಯಾವಾದರೇನು.

೨೩೪೩ ಬಿಡಿಸುವವನ ಸಂಗಡ ಬಿಗಿ ಮಾಡ ಬಾರದು.

೨೩೪೪ ಬಿಡುಗಡೆಯಾದರೂ ನಡುರಾತ್ರೆ ಸಂಚಾರ ಬಿಡಲಿಲ್ಲ.

೨೩೪೫ ಬಿಡುದಿಯೊಳಗೆ ಹಡದಿ ತಪ್ಪೀತೇ.

೨೩೪೬ ಬಿತ್ತಿದ ಪೈರು ಕೆತ್ತಿದರೆ ಆದೀತೇ.
೨೩೪೭ ಬಿತ್ತಿದ ಬೀಜಕ್ಕೆ ಸತ್ತಿಗೆ ಹಿಡಿದ ಹಾಗೆ.
೨೩೪೮ ಬಿದರು ತಟ್ಟಿ ಮಾರಿದಾಕ್ಷಣ ಸೆಟ್ಟಿ ಆದಾನೇ.
೨೩೪೯ ಬಿದ್ದ ಬಳ್ಳೀಲಿ ಬೆರಣಿ ಆಯ ಬೇಕು, ಇದ್ದ ಬಳ್ಳೀಲಿ ಇರ ಬೇಕು.
೨೩೫೦ ಬಿನ್ನವತ್ತಳೆ ಬರದರೆ ಹೊನ್ನು ಬಂದ ಹಾಗಾಯಿತೇ.
೨೩೫೧ ಬಿಮ್ಮಗೆ ಹಿಡಿದರೆ ಹಮ್ಮು ಹೋಗದೇ.
೨೩೫೨ ಬಿರುಘಾಳಿಗೆ ಹಿಡಿದರೆ ಸರಿಗೆ ಆದೀತೇ.
೨೩೫೩ ಬಿಲ್ಲಾದರೆ ಹುಲ್ಲು ಕೊಯ್ಯೋಕ್ಕೆ ಆದೀತೇ.
೨೩೫೪ ಬಿಸಿ ಆದ್ದು ಆರಿಸ ಬೇಕು ಹಸಿಯಾದ್ದು ಕಾಯಿಸ ಬೇಕು.
೨೩೫೫ ಬಿಸಿ ಇಲ್ಲದೆ ಬೆಣ್ಣೆ ಕರಗದು.
೨೩೫೬ ಬಿಸಲಲ್ಲಿ ಹೋಗುವಾಗ ಹಶೀ ಸುದ್ದಿ ಯಾಕೆ.
೨೩೫೭ ಬಿಸಲು ಬಂದ ಕಡೆಗೆ ಕೊಡೆ ಹಿಡಿಯುತ್ತಾನೆ.
೨೩೫೮ ಬೀಗನ ಹತ್ತರ ಹೋಗಿ ಹಾಗೂವೀಸ ಕೇಳಿದ ಹಾಗೆ.
೨೩೫೯ ಬೀಜ ವೊಂದಾದರೆ ಫಲ ವೊಂದೇಯೇ.
೨೩೬೦ ಬೀಜವಿಲ್ಲದೆ ಮರವಿಲ್ಲ, ಮರವಿಲ್ಲದೆ ಬೀಜವಿಲ್ಲ.
೨೩೬೧ ಬೀಜ ಸಣ್ಣದಾದರೆ ಮರ ಸಣ್ಣದೋ.
೨೩೬೨ ಬೀಡಿಕೆ ಯೆತ್ತು ಆದರೆ ಹಾಡಿಕೆಯಿಂದ ಬಂದೀತೇ.
೨೩೬೩ ಬೀದೀಲಿ ಬೆಲ್ಲ ಸುರಿದು ಹಾದಿಯವರ ಸಂಗಡ ಜಗಳಾಡಿದ ಹಾಗೆ.
೨೩೬೪ ಬೀಸುವ ಕೈ ತಪ್ಪಿದರೆ ಸಹಸ್ರ ಕಾಲ.
೨೩೬೫ ಬೀಸುವ ಮುಂಡೆಗೆ ಮುಕ್ಕಿದ್ದೇ ಲಾಭ.
೨೩೬೬ ಬುಕ್ಕರಾಯ ಮೆಚ್ಚಿ ಬೆಕ್ಕಿನ ಮರಿ ಕೊಟ್ಟ.
೨೩೬೭ ಬುಗಡಿ ಆದರೆ ಧಗಡೀ ಮಗಳಿಗೆ ಆಗದೇ.
೨೩೬೮ ಬುಡ ಕಡಿದ ಮೇಲೆ ಮರ ಬಾಳೋದುಂಟೇ.
೨೩೬೯ ಬುಡ ಹತ್ತಲರಿಯದವ ನಡು ಹತ್ತ್ಯಾನೇ.

೨೩೭೦ ಬುತ್ತಿ ಇದ್ದವ ಯೆತ್ತಲೂ ಉಂಡಾನು.

೨೩೭೧ ಬುಧವಾರವಾದರೆ ಯಾಯುವಾರ ಇಕ್ಕ ಬಾರದೇ.

೨೩೭೨ ಬುಧವಾರವಾದರೆ ಸದೆ ಗೂಡಿಸ ಬಾರದೇ.

೨೩೭೩ ಬುದ್ಧಿ ಇಲ್ಲದ ಮುಕ್ಕ ಇದ್ದವರಿಗೆಲ್ಲ ಕೇಡು ತಂದ.

೨೩೭೪ ಬುದ್ಧಿ ಇಲ್ಲದವನ ಸ್ನೇಹ ಇದ್ದ ಮಾನಕ್ಕೆ ಹಾನಿ.

೨೩೭೫ ಬುದ್ಧಿವಂತಗೆ ಮೂರು ಕಡೆ, ಅಪ್ರಬುದ್ಧಗೆ ವೊಂದೇ ಕಡೆ.

೨೩೭೬ ಬುದ್ಧಿವಂತ ಬೆಣ್ಣೆ ತಿಂದು ಅಪ್ರಬುದ್ಧನ ಬಾಯಿಗೆ ವೊರಸಿದ.

೨೩೭೭ ಬುದ್ಧಿವಂತರ ಮೋರೆ ಮುದ್ದಿನ ಹಾಗೆ ಇದ್ಧೀತು.

೨೩೭೮ ಬುದ್ಧಿ ಹೇಳಿದವರ ಸಂಗಡ ಗುದ್ದ್ಯಾಟಕ್ಕೆ ಹೋದ ಹಾಗೆ.

೨೩೭೯ ಬುರುಜು ಇಲ್ಲಿದಿದ್ದರೆ ಕುರುಜು ಅದರೂ ಕಟ್ಟ ಬಾರದೇ.

೨೩೮೦ ಬುರುಡೆ ಆದರೆ ಬರಡೆಮ್ಮೇ ಹಾಲು ಕರಿಯೊಕ್ಕಾಗದೇ.

೨೩೮೧ ಬೂಟಕತನ ಮಾಡಿದರೆ ಕಾಟಕತನ ತಪ್ಪೀತೇ.

೨೩೮೨ ಬೂದಿ ಕಾಣದವ ಹಿಟ್ಟು ಕಂಡ ಹಾಗೆ.

೨೩೮೩ ಬೂದಿ ಮುಕ್ಕುವವ ಹಿಟ್ಟು ಬಿಟ್ಟಾನೇ.

೨೩೮೪ ಬೂರುಗದ ಮರ ಗಿಣಿ ಕಾದ ಹಾಗೆ.

೨೩೮೫ ಬೆಂಕಿ ಆರಿದರೂ ಸುಂಕ ಆರಲಿಲ್ಲ.

೨೩೮೬ ಬೆಂಕಿ ಡೊಂಕಿಗೆ, ಬೆಂಡು ನೀರಿಗೆ.

೨೩೮೭ ಬೆಂಕಿ ಹಾಕಿದರೆ ಸಂಕನ ಮನೆ ಸುಡದೇ.

೨೩೮೮ ಬೆಂದ ಬಾಯಿಗೆ ಬಂದದ್ದೇ ಮಂಗಳಾಷ್ಟಕ.

೨೩೮೯ ಬೆಂದ ಮನೆಗೆ ಹಿರಿದೇ ಲಾಭ.

೨೩೯೦ ಬೆಕ್ಕಿಗೆ ಆಟ, ಇಲಿಗೆ ಪ್ರಾಣಸಂಕಟ.

೨೩೯೧ ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದರೆ ಹೊಕ್ಕವರಿಗೆ ಕಾಣದೇ.

೨೩೯೨ ಬೆಚ್ಚುವನಿಗೆ ಕಚ್ಚಿದ ಹಾಗೆ.

೨೩೯೩ ಬೆಟ್ಟ ಅಗಿದು ಇಲಿ ಹಿಡಿದ ಹಾಗೆ.

೨೩೯೪ ಬೆಟ್ಟಕ್ಕೆ ಹೋಗುವವನ ಸೊಂಟದಲ್ಲಿ ಕುಡುಗೋಲು ಶಿಕ್ಕಿಸಿದ [ಹಾಗೆ.
೨೩೯೫ ಬೆಟ್ಟದ ನಾಯಿಗೆ ಹಿಟ್ಟೂ ಇಲ್ಲ, ಪೆಟ್ಟೂ ಇಲ್ಲ.
೨೩೯೬ ಬೆಟ್ಟದ ಮೇಲೆ ಕೂತ ಭಟ್ಟ ಬೆಲ್ಲ ಬಯಸಿದ ಹಾಗೆ.
೨೩೯೭ ಬೆಟ್ಟ ಬಿಸಿಲಲ್ಲಿ ಬೆಯ್ಯುತ್ತದೆ ಯೆಂದು ಸೆಟ್ಟಿ ಅತ್ತ ಹಾಗೆ.
೨೩೯೮ ಬೆಟ್ಟಿ ಚೆನ್ನವಾದರೆ ಸೆಟ್ಟಿಗೆ ಆಗದೇ.
೨೩೯೯ ಬೆತ್ತದ ಪೆಟ್ಟು ಹೆತ್ತವರು ಹೊಡದರೆ ನೋಯದೇ.
೨೪೦೦ ಬೆದಕುವವನು ಬದಕು ಮಾಡ್ಯಾನೇ.
೨೪೦೧ ಬೆನ್ನು ಬಿಡದ ಪಿಶಾಚಿ ಹೊನ್ನು ಕೊಟ್ಟರೆ ನಿತ್ತೀತೇ.
೨೪೦೨ ಬೆನ್ನು ಹಿಂದೆ ಬಂತು ಬೇತಾಳ.
೦೪೦೩ ಬೆರಣಿ ಸುಟ್ಟ ಬೂದಿಯಾದರೂ ಧರಣೀ ಮೇಲಿರುತ್ತದೆ.
೨೪೦೪ ಬೆರಳು ತೋರಿಸಿದರೆ ಕೈ ನುಂಗುತ್ತಾನೆ.
೨೪೦೫ ಬೆರಳು ಬಾತರೆ ವೊರಳಷ್ಟು ಆದೀತೇ.
೨೪೦೬ ಬೆಲೆ ಇಲ್ಲದ ಸರಕಾದರೆ ನೆಲದ ಮೇಲೆ ಚೆಲ್ಲ್ಯಾರೇ.
೨೪೦೭ ಬೆಲೆ ಬಿದ್ದ ಸರಕಿನಲ್ಲಿ ಲಾಭ ಉಂಟೇ.
೨೪೦೮ ಬೆಲ್ಲವಿದ್ದ ಕಡೆ ನೊಣ, ಧಡೆ ನಾಲ್ಕಕ್ಕೆ ಮಣ.
೨೪೦೯ ಬೆಲ್ಲವಿಲ್ಲದಿದ್ದರೆ ಬೆಲ್ಲದಂಥ ಮಾತು ಇಲ್ಲವೇ.
೨೪೧೦ ಬೆವರು ಸುರಿದರೂ ಶೌರ್ಯ ಹೋಗಲಿಲ್ಲ.
೨೪೧೧ ಬೆವಸಾಯದವನಾದರೂ ಜನ ಸಹಾಯ ಬೇಕು.
೨೪೧೨ ಬೆಸ್ತರೆ ಕೂಡದ್ದು ಸಸ್ತರೆ ಕೂಡೀತೇ.
೨೪೧೩ ಬೆಳಕಿಡುವದಕ್ಕೆ ಇಲ್ಲದವ ಮಲಕು ಬಯಸಿದ ಹಾಗೆ.
೨೪೧೪ ಬೆಳಕು ಇಲ್ಲದಿದ್ದರೂ ಬಳಕೆಗೆ ಕಡಿಮೆ ಇಲ್ಲ.
೨೪೧೫ ಬೆಳಕು ಇಲ್ಲದೆ ಹೊಳಕು ಕಂಡೀತೇ.
೨೪೧೬ ಬೆಳಗವರೆಗೆ ಕಡದ ಬೆಣ್ಣೆ ವೋಳ ಬೆಕ್ಕಿನ ಪಾಲು ಆಯಿತು.
೨೪೧೭ ಬೆಳಗಾದ ಮೇಲೆ ಬೆಟ್ಟದ ಯೋಚನೆ.

೨೪೧೮ ಬೆಳಗಾನಾ ರಾಮಾಯಣಾ ಕೇಳಿ ಸೀತೆಯೂ ರಾಮನೂ ಯೇನಾಗ

೨೪೧೯ ಬೆಳಸುವವ ಬಳಸಿದರೆ ಬಳ್ಳಿ ಕಾಳು ಇಲ್ಲವೇ. [ಬೇಕೆಂದು ಕೇಳಿದ.

೨೪೨೦ ಬೆಳೇ ಶಿರಿ ಮೊಳೆತೇ ಕಾಣುವದು.

೨೪೨೧ ಬೆಳ್ಳಿ ಬೆಸಿಯ ಬೇಕಾದರೆ ಕಳ್ಳೀ ಹಾಲು ಬೇಕೇ.

೨೪೨೨ ಬೆಳ್ಳಿಯಾದರೂ ಬಳ್ಳಿ ಮಾಡ ಬೇಕಾದರೆ ಕೊಳ್ಳಿ ಬೇಕು.

೨೪೨೩ ಬೆಳ್ಳಿಯಾದರೆ ಕಳ್ಳಗೆ ಆಗದೇ.

೨೪೨೪ ಬೆಳ್ಳಿ ಇದ್ದವನಿಗೂ ಕೊಳ್ಳೀ ಭಯ ತಪ್ಪಲಿಲ್ಲ.

೨೪೨೫ ಬೆಳ್ಳುಳ್ಳಿಯಾದರೆ ಹಳ್ಳಿಯವಗೆ ಆಗದೇ.

೨೪೨೬ ಬೇಕಾದದ್ದಾದರೆ ಬೇಗ ಸಿಕ್ಕೀತೇ.

೨೪೨೭ ಬೇಕಾದ್ದು ಇದ್ದರೂ ಸೋಕೋದು ತಪ್ಪಲಿಲ್ಲ.

೨೪೨೮ ಬೇಕಾದ್ದು ಕೊಟ್ಟರೂ ನೂಕಿಸಿ ಕೊಳ್ಳೋದು ತಪ್ಪಲಿಲ್ಲ.

೨೪೨೯ ಬೇಕು ಅಂದಾಕ್ಷಣ ನಾಕ ಶೇರುವನೇ.

೨೪೩೦ ಬೇಕು ಯೆಂತ ಬಯಸಿದ್ದು ಬೇಸರವಾದೀತೇ.

೨೪೩೧ ಬೇಗಡೇ ತಗಡಾದರೆ ಬುಗಡಿಗೆ ಆದೀತೇ.

೨೪೩೨ ಬೇಗ ಮಾಡಿದವನಿಗೆ ಹಾಗೂವೀಸ.

೨೪೩೩ ಬೇಗೆ ಹತ್ತಿದ್ದಲ್ಲಿ ಹೊಗೆಗೆ ನಿಮಿತ್ಯ ಕೇಳ ಬೇಕೇ.

೨೪೩೪ ಬೇಟೆಗಾರ ತೋಟ ಮಾಡ್ಯಾನೇ.

೨೪೩೫ ಬೇಟೆಗೋಸ್ಕರ ಬಂದು ಲೂಟಿ ಮಾಡಿದ ಹಾಗೆ.

೨೪೩೬ ಬೇಡ ಅಂದರೂ ಮಗ ಆಡು ಕಾಯೋದು ಬಿಡುವದಿಲ್ಲ.

೨೪೩೭ ಬೇಡವಾದ್ದು ಕೂಡಿಸಿದರೆ ಆದೀತೇ.

೨೪೩೮ ಬೇಡಿ ಕೊಂಡಷ್ಟೂ ಹೇಡಿತನ ಹೋಗಲಿಲ್ಲ.

೨೪೩೯ ಬೇಡಿ ಕೊಂಡು ತಿನ್ನ ಬಹುದು, ಕದ್ದು ಕೊಂಡು ತಿನ್ನ ಬಾರದು.

೨೪೪೦ ಬೇಡಿಲಿದ್ದವಗೆ ನಾಡಿನ ಯೋಚನೆಯೇ.

೨೪೪೧ ಬೇಡಿಲಿ ಬಿದ್ದರೂ ಕೇಡು ಬಿಡಲಿಲ್ಲ.

೨೪೪೨ ಬೇತಾಳನಾದರೆ ನೇತಾಡ್ಯಾನು, ಮಾತಿಗೆ ಪ್ರಸವವೇದನೆ.

೨೪೪೩ ಬೇನೆ ಗಾನದಿಂದ ಹೋದೀತೇ.

೨೪೪೪ ಬೇನೆ ನಿತ್ತರೂ ಹೇನಿನ ಕಾಟ ನಿಲ್ಲಲಿಲ್ಲ.

೨೪೪೫ ಬೇಯಿಸಿದ ಅನ್ನ ಪಾಯಸವಾಗದೇ.

೨೪೪೬ ಬೇರು ಇದ್ದರೆ ಸಾರು ಸಿಕ್ಕೀತು.

೨೪೪೭ ಬೇರು ಬಲ್ಲ ನಲ್ಲಗೆ ಯೆಲೆ ತೋರಿಸೋದ್ಯಾಕೆ.

೨೪೪೮ ಬೇರು ಹೋದ ಮೇಲೆ ಮರದ ಯೋಚನೆ ಯಾಕೆ.

೨೪೪೯ ಬೇರೆ ಮಾಡಿದರೆ ಸಾರೋದು ತಪ್ಪೀತೇ.

೨೪೫೦ ಬೇರೆಯಾದರೂ ಹಾರ್‍ಯಾಡೋದು ತಪ್ಪಲಿಲ್ಲ.

೨೪೫೧ ಬೇಲಿ ಯೆದ್ದು ಹೊಲ ಮೇಯುವಾಗ್ಯೆ ಕಾಯೋದು ಯಾರು.

೨೪೫೨ ಬೇವು ಶೀಯಾಗದು, ಸಕ್ಕರೆ ಕಹಿಯಾಗದು.

೨೪೫೩ ಬೇಸರಿಗೆಂತಾ ಹಾಸರ ಕತ್ತೆ ಆಡಿಸಿದ.

೨೪೫೪ ಬೇಳ್ಳೇಸಾರಾದರೆ ಬೋಳಿಗೆ ಆಗದೇ.

೨೪೫೫ ಬೈದ ಬಾಯಿಗೆ ಹೊಯಿದ ಪೆಟ್ಟು.

೨೪೫೬ ಬೈರಾಗಿಗೆ ಬೈಲಾದರೇನು, ಬೇಲಿಯಾದರೇನು.

೨೪೫೭ ಬೊಂದು ಗಿಡದಲ್ಲಿ ಗೊಂದು ಆದೀತೇ.

೨೪೫೮ ಬೊಂಬೆ ಆದರೆ ಹಂಬಲಿಸಿದ ಹಾಗೆ ಕೊಟ್ಟೀತೇ.

೨೪೫೯ ಬೊಕ್ಕನಾದರೂ ಠಕ್ಕುತನ ಬಿಡಲಿಲ್ಲ.

೨೪೬೦ ಬೊಕ್ಕಸದಲ್ಲಿ ಹಣ ಉಂಟೆಂದರೆ ಅಕ್ಕ ಸಾಕ್ಯಾಳೇ.

೨೪೬೧ ಬೊಕ್ಕೆ ಯೆದ್ದರೆ ರೊಕ್ಕ ಬಂಗೀತೇ.

೨೪೬೨ ಬೊಕ್ಕೆಗೆ ಮದ್ದು ಬೋರೇ ಹಣ್ಣೇ.

೨೪೬೩ ಬೊಗರೀ ಹಾಗೆ ತಿರುಗಿದರೂ ಹಗರತ್ವ ಹೋಗಲಿಲ್ಲ.

೨೪೬೪ ಬೊಗಸೇ ನೀರು ಅಗಸನಿಗ್ಯಾಕೆ.

೨೪೬೫ ಬೊಗಳುವನ ಹೊಗಳಿದರೆ ಬಿಟ್ಟಾನೇ.

೨೪೬೬ ಬೊಗಳುವ ನಾಯಿಗೆ ದಡಿ ಸುರಿದ ಹಾಗೆ.

೨೪೬೭ ಬೊಗ್ಗಿ ನೋಡಿದರೆ ತಗ್ಗಿನಲ್ಲಿರುವದು ಸಿಕ್ಕೀತೇ.

೨೪೬೮ ಬೊಚ್ಚಬಾಯಿ ಆದವನು ಕೆಬ್ಬೆಕೆತ್ತಿದ ಕಬ್ಬು ಬಯಸಿದ ಹಾಗೆ.

೨೪೬೯ ಬೊಜ್ಜು ಇದ್ದರೆ ಖಜ್ಜಿ ಬಿಡುವದೇ.

೨೪೭೦ ಬೊಟ್ಟು ಶೀಪಿದರೆ ಹೊಟ್ಟೆ ತುಂಬೀತೇ.

೨೪೭೧ ಬೊಡ ಬೊಡನೆ ಸುರಿಯುವವನು ಕಡಕಡನೆ ನಡದಾನೇ.

೨೪೭೨ ಬೊಡಿಯುವ ಗಂಡನ ಹತ್ತರ ಹಿಡಿವರಹಾ ಇದ್ದರೇನು.

೨೪೭೩ ಬೊಡ್ಡೀಮಗನಾದರೆ ಬಡ್ಡಿಗೆ ಅಡ್ಡಿ ಯೇನು.

೨೪೭೪ ಬೊಬ್ಬೆ ಮಾಡಿದರೆ ಹಬ್ಬ ಆದೀತೇ.

೨೪೭೫ ಬೊಬ್ಬೇ ಜಂಗಮನ ಸಂಗಡ ಕಬ್ಬಿನ ಸಮಾಚಾರವೇ.

೨೪೭೬ ಬೋಣಿ ಮಾಡ ಬೇಕಾದರೂ ಜಾಣನಾಗ ಬೇಕು.

೨೪೭೭ ಬೋದು ಬೆಳದ ಹೊಲ ಹಾದೀಲಿದ್ದರೇನು, ಬೀದೀಲಿದ್ದರೇನು.

೨೪೭೮ ಬೋದು ಹೊಲ ಬಾಧೆಗೆ ಕಾರಣ.

೨೪೭೯ ಬೋಧಕನಾದರೆ ಸಾಧಕ ಮಾಡಲಿ ಹಾದಿಗೇನು ಅಡ್ಡಿ.

೨೪೮೦ ಬೋಧನೆ ಮಾಡಿದರೆ ತಿದಿ ಅಲ್ಲಾಡೀತೇ.

೨೪೮೧ ಬೋನವಾದರೆ ಹೀನನಿಗೆ ಆಗದೇ.

೨೪೮೨ ಬೋರೇ ಗಿಡಕ್ಕೆ ಕಾರೇ ಹಣ್ಣು ಆದೀತೇ.

೨೪೮೩ ಬೋರೇ ಮೇಲಣ ನೀರು ನಾರಿ ಕೋರಿದರೆ ಬಂದೀತೇ.

೨೪೮೪ ಬೋಳಿಗೆ ಸುಂಕವಿಲ್ಲ, ಸೂಳೆಗೆ ಕರುಣವಿಲ್ಲ.

೨೪೮೫ ಬೋಳಿಗೆ ಹಾಳುಮನೆ ಆದರೇನು, ಕೂಳು ಸಿಕ್ಕಿದರೆ ಸರಿ.

೨೪೮೬ ಬೋಳಿ ತುರುಬ ನೆನಸಿ ಕೊಂಡ ಹಾಗೆ.

೨೪೮೭ ಬೋಳುಮನೆ ಘೂಳಿಗೆ ಅಂಜೀತೇ.

೨೪೮೮ ಬೌಧನಾದರೂ ಬುದ್ಧಿ ಇರ ಬೇಕು.

೨೪೮೯ ಬ್ರಹ್ಮಾಂಡವಾದಂಥಾದ್ದು ಗುಡಾಣದಲ್ಲಿ ಹಿಡದೀತೇ.

೨೪೯೦ ಬ್ರಹ್ಮೇತಿ ಮಾಡುವವನು ಬ್ರಾಹ್ಮರಿಗಿಕ್ಕ್ಯಾನೇ.
೨೪೯೧ ಬ್ರಾಹ್ಮಣನಾದರೆ ಕಣ್ಣೀರು ಬಾರದೇ.
೨೪೯೨ ಭಂಗಪಡಿಸುವವನ ಹತ್ತರ ಭಂಗಾರದಾಶೆಯೇ.
೨೪೯೩ ಭಂಗಾರದ ಕತ್ತಿಯಾದರೆ ರಕ್ತ ಬಾರದೇ.
೨೪೯೪ ಭಂಗಾರದ ಸೂಜಿ ಯೆಂತ ಹಿಂಗದೆ ಕಣ್ಣು ಕುಕ್ಕಿಕೊಳ್ಳ ಬಹುದೇ.
೨೪೯೫ ಭಂಗಾರವಿದ್ದರೆ ಶೃಂಗಾರ.
೨೪೯೬ ಭಂಗಾರ ವೊಂದು, ವೊಡವೆ ಹಲವು.
೨೪೯೭ ಭಂಗಿ ಕುಡಿಯುವನಿಗೆ ಹಂಗು ಯಾರದು.
೨೪೯೮ ಭಂಗಿ ಮುಕ್ಕುವನಿಗೆ ಅಂಗಿ ಆದರೂ ಉಳಿಯದು.
೨೪೯೯ ಭಂಗಿ ಸುಟ್ಟರೂ ಹಂಗು ಸುಡಲಿಲ್ಲ.
೨೫೦೦ ಭಂಡನ ಕಂಡರೆ ಕಂಡೀಲಿ ಆದರೂ ಹೋಗ ಬೇಕು.
೨೫೦೧ ಭಂಡನ ಕೊಲ್ಲುವವರಿಲ್ಲ, ನಾಯಿ ತಿನ್ನುವವರಿಲ್ಲ.
೨೫೦೨ ಭಂಡನ ಸ್ನೇಹ ಮಾಡಿ ಇದ್ದ ಭಂಡ ಕಳಕೊಂಡ.
೨೫೦೩ ಭಂಡನ ಸ್ನೇಹ ಮಾಡಿದರೆ ಭಂಗ ತಪ್ಪದು.
೨೫೦೪ ಭಂಡಾರ ದ್ರೋಹ ಮಾಡಿ ಬೋಳಿ ಮುಂದೇ ಮರೆಬಿದ್ದ.
೨೫೦೫ ಭಂಡಾರವಿದ್ದರೂ ಭಂಗ ತಪ್ಪಲಿಲ್ಲ.
೨೫೦೬ ಭಕ್ತನಾದವಗೆ ಭಿಕ್ಕರಿ ಸಿಕ್ಕದೇ.
೨೫೦೭ ಭಕ್ತನಿಗೆ ಭುಕ್ತಿ, ಶಕ್ತನಿಗೆ ಕತ್ತಿ.
೨೫೦೮ ಭಕ್ತಿಯಿಂದ ಮುಕ್ತಿ, ಯುಕ್ತಿಯಿಂದ ಉಕ್ತಿ.
೨೫೦೯ ಭಗೀರಥ ಯತ್ನ ಮಾಡಿ ಭಾಗೀರಥಿ ತಂದ, ನಗರದವ ಯತ್ನ ಮಾಡಿ ನಗಾ ಕಳಕೊಂಡ.
೨೫೧೦ ಭಟ್ಟ ಕೆಟ್ಟಕೂಳ ತಿಂದು ನಿಟ್ಟುಸುರು ಬಿಟ್ಟ.
೨೫೧೧ ಭಟ್ಟ ಕೊಟ್ಟಷ್ಟು ಕೊಂಡರೆ ಕೆಟ್ಟು ಹೋಗಲಾರ.
೨೫೧೨ ಭಟ್ಟನಿಗೆ ಮಂತ್ರ ಕಡಿಮೆಯಾದರೂ ಹೊಟ್ಟೆ ದೊಡ್ಡದು.

೨೫೧೩ ಭಟ್ಟರಿಗೆ ಮಂತ್ರ ಸ್ವಲ್ಪ, ಉಗುಳು ಬಹಳ.
೨೫೧೪ ಭಟ್ಟರೇ ತುಪ್ಪವಲ್ಲ, ರಕ್ತ ಅಂದ ಹಾಗೆ. [ಇಲ್ಲ ಅಂದ.
೨೫೧೫ ಭಟ್ಟರೇ ಯಾವಾಗ ಬಂದಿರಿ ಅಂದರೆ ಉಟ್ಟು ಕೊಳ್ಳಲಿಕ್ಕೆ ಬಟ್ಟೆ
೨೫೧೬ ಭಟ್ಟರೇ ಕ್ಷೇಮವೋ ಅಂದರೆ ಕೊಟ್ಟ ಯೆರಡು ದುಡ್ಡು ಇಂಗಿ
೨೫೧೭ ಭತ್ತ ಕತ್ತೆ ಹೊತ್ತರೆ ಅತ್ತೆ ಅಡಿಗೆ ಮಾಡಳ್ಳೇ. [ಅಂದ.
೨೫೧೮ ಭದ್ರಾಕರಣ ಮಾಡಿ ಕೊಂಡರೆ ಭದ್ರವಾದೀತೇ.
೨೫೧೯ ಭದ್ರಾ ಮಾಡಿದಷ್ಟೂ ನಿದ್ರೆ ಬಿಡುವದಿಲ್ಲ.
೨೫೨೦ ಭಯದಿಂದ ಭಕ್ತಿ, ನಯದಿಂದ ಯುಕ್ತಿ.
೨೫೨೧ ಭಯವಾದ ವಸ್ತು ನಯವಾದರೂ ನಂಬ ಕೂಡದು.
೨೫೨೨ ಭಯವಾದ್ದು ನಯದಿಂದ ಲಯವಾದೀತೇ.
೨೫೨೩ ಭರಣಿಯಾದರೆ ಕರಣಿಕ ಮಾಡ್ಯಾನೇ.
೨೫೨೪ ಭರದಿಂದ ಹೋಗುವವನ ಸಂಗಡ ಹೊರೇ ಹೊತ್ತಿಯಾ ಅಂದ.
೨೫೨೫ ಭರಭರನೆ ಹೋಗಿ ಭುರ್ರನೇ ಹಾರಿ ಬಂದ ಹಾಗೆ.
೨೫೨೬ ಭರಭರನೆ ಹೋಗಿ ಭೈರವ ದೇವರ ಸಂಗಡ ಭೈರವಾಸ ಕೇಳಿದ.
೨೫೨೭ ಭರವಸ ಇಲ್ಲದ ಮಾತು ಕೇಳಿ ಭಂಡವಾಳ ಕಳಕೊಂಡ.
೨೫೨೮ ಭರ್ತಿ ಮಾಡುವವ ಕೀರ್ತಿ ಪಟ್ಟಾನೇ.
೨೫೨೯ ಭಲಾ ಜಟ್ಟೀ ಅಂದರೆ ಕೆಮ್ಮಣ್ಣು ಮುಕ್ಕಿದ.
೨೫೩೦ ಭಕ್ಷ್ಯವಿಲ್ಲದಿದ್ದರೂ ದಕ್ಷಿಣೆ ಸಿಕ್ಕಿದರೆ ಸಾಕು.
೨೫೩೧ ಭಾಗಾಕಾರಾ ತಿಳಿಯದಿದ್ದರೆ ಹಾಗದ ಲಕ್ಷಣ ತಿಳಿಯದೇ.
೨೫೩೨ ಭಾಗ್ಯ ಬರುವಂಥಾದ್ದು ಭಾಗಮ್ಮ ತಡದಾಳ್ಯೇ.
೨೫೩೩ ಭಾದ್ರಪದ ಮಾಸವಾದರೂ ಭಾಂಡಾ ಹೊರೋದು ತಪ್ಪಲಿಲ್ಲ.
೨೫೩೪ ಭಾರವಾದ ಪಾಪಕ್ಕೆ ಘೋರವಾದ ನರಕ.
೨೫೩೫ ಭಾರವಾದ್ದು ಹೊತ್ತಾಕ್ಷಣ ಹಾರಲಿಕ್ಕೆ ಕೂಡದೇ.
೨೫೩೬ ಭಾವನಂಟ ಬಂದಾಗ್ಯೂ ಹಾಲು ಚಲ್ಲೋದು ಬಿಡಲಿಲ್ಲ.

೨೫೩೭ ಭಾವಸಾದರೆ ಭಾರವಾದ ಹೊರೆ ಹೊತ್ತಾನೇ.
೨೫೩೮ ಭಾವಾರ್ಥವಿದ್ದರೂ ಸ್ವಾರ್ಥ ಬಿಡಲಿಲ್ಲ.
೨೫೩೯ ಭಾವೀ ನೀರಾದರೆ ಭಾವಿಸಿದರೆ ಬಂದೀತೇ.
೨೫೪೦ ಭಾಷೆ ಕೊಟ್ಟವನು ಪೋಷಣೆ ಮಾಡನೇ.
೨೫೪೧ ಭಾಷೆ ತಿಳಿಯದಿದ್ದರೂ ಹಾಸ್ಯಕ್ಕೆ ಕಡಿಮೆ ಇಲ್ಲ.
೨೫೪೨ ಭಾಸಿಗವಾದರೆ ಹಾಸಿಗೆಯಲ್ಲಿ ಯಾಕೆ.
೨೫೪೩ ಭಿನ್ನವಾದ ಗಡಿಗೆ ಹೊನ್ನು ಕೊಟ್ಟರೆ ಸಮನಾದೀತೇ.
೨೫೪೪ ಭಿಕ್ಷೆ ಬೇಡ ನಾಯನ್ನ ಹಿಡೀರಿ ಅಂದ.
೨೫೪೫ ಭುಕ್ತಿಗೆ ಸಿಕ್ಕಿದಾಕ್ಷಣ ಮುಕ್ತಿ ಸಿಕ್ಕಿದ ಹಾಗಾಯಿತೇ.
೨೫೪೬ ಭೂತ ಹೋದರೂ ಹೇತು ಕೊಳ್ಳೋದು ತಪ್ಪಲಿಲ್ಲ.
೨೫೪೭ ಭೂತ ಮರುಳೋ ಮಾಡ ಮರುಳೋ.
೨೫೪೮ ಭೂತವಾದರೂ ಭುಕ್ತಿಗೆ ಹಾಕಿದ ಹೊರ್ತು ಭೀತಿ ತಪ್ಪದು.
೨೫೪೯ ಭೂಮಿ ಇದ್ದವನಾದರೆ ಭೂರಿದಕ್ಷಿಣೆ ಕೊಟ್ಟಾನೇ.
೨೫೫೦ ಭೇದಾ ತಿಳಿಯದಿದ್ದರೂ ವಾದಾ ಬಿಡುವದಿಲ್ಲ.
೨೫೫೧ ಭೈರಿಗೆಯಿಂದ ಹೂರಿಗೆ ಆದೀತೇ.
೨೫೫೨ ಭೋಗಿಗೆ ಯೋಗಿ ಮರುಳು, ಯೋಗಿಗೆ ಭೋಗಿ ಮರುಳು.
೨೫೫೩ ಭೋಜನವಿಲ್ಲದಿದ್ದರೂ ಭಜನೆ ಇರ ಬೇಕು.
೨೫೫೪ ಭ್ರಮರ ಭ್ರಮಿಸಿ ಬೆಳಗೂ ಭಂಗ ಪಟ್ಟ ಹಾಗೆ.
೨೫೫೫ ಭ್ರಮೆ ಇದ್ದವಗೆ ಶ್ರಮೆ ಇಲ್ಲ, ಶ್ರಮೆ ಇದ್ದವಗೆ ಭ್ರಮೆ ಇಲ್ಲ.
೨೫೫೬ ಭ್ರಷ್ಟನಾದರೂ ಕಷ್ಟ ತಪ್ಪದು.
೨೫೫೭ ಭ್ರಾಂತಿ ಹಿಡಿದವನಿಗೆ ವಾಂತಿ ಕೊಟ್ಟರೆ ಹೋದೀತೇ.
೨೫೫೮ ಭ್ರಾಂತಿ ಹೋದರೂ ಭಯ ಹೋಗಲಿಲ್ಲ.
೨೫೫೯ ಮಂಕಿ ಮಗನಾದರೆ ಸುಂಕ ಕೊಡ ಬಾರದೇ.
೨೫೬೦ ಮಂಕು ಮೂಳಿ ಆದರೆ ಬೆಂಕಿ ಹೊತ್ತದೇ.

೨೫೬೧ ಮಂಗನ ಕೈಯಲ್ಲಿ ಮಾಣಿಕ ಕೊಟ್ಟ ಹಾಗೆ.

೨೫೬೨ ಮಂಗನ ಕೊಂದು ಮೈಗೆಲ್ಲಾ ಹೇಲು.

೨೫೬೩ ಮಂಗನ ಪಾರುಪತ್ಯ ಹೊಂಗೇ ಮರದ ಮೇಲೆ.

೨೫೬೪ ಮಂಗಳ ಗಾನ ಮಂಗಕ್ಕೆ ಆದೀತೇ.

೨೫೬೫ ಮಂಗಳವಾರದ ವರೆಗೆ ಸಂಗಳ ತೊಳಿಯು ಬಾರದೇ.

೨೫೬೬ ಮಂಗಳಾರ್ತೀ ಕಾಲದಲ್ಲಿ ಮಂಗ ಬಂದ ಹಾಗೆ.

೨೫೬೭ ಮಂಚಕ್ಕೆ ಮಣೆ ಯಾಕೆ, ಲಂಚಕ್ಕೆ ಹೊಣೆ ಯಾಕೆ.

೨೫೬೮ ಮಂಚದ ಕಾಲು ಆದರೆ ಹಂಚು ಮಾಡ ಬಹುದೇ.

೨೫೬೯ ಮಂಜಿಯೊಡದರೆ ಗುಂಜಿಗಿಂತ ಕಡೆಯೇ.

೨೫೭೦ ಮಂಜು ಬಿದ್ದರೆ ನಂಜು ಹೋದೀತೇ.

೨೫೭೧ ಮಂಜು ಸುರಿದರೆ ನಂಜನಗೋಡು ಮುಣುಗೀತೇ.

೨೫೭೨ ಮಂಟಪದಲ್ಲಿ ಕೂತರೂ ಕಂಟಕ ಬಿಡಲಿಲ್ಲ.

೨೫೭೩ ಮಂಡಿ ಹಾಕಿ ಕೂತರೆ ಮಂಡಿಗೆ ಬಡಿಸ್ಯಾರೇ.

೨೫೭೪ ಮಂಡೆ ಇರುವಾಗ್ಯ ಮೊಣಕಾಲಿಗೆ ಪಟ್ಟವೇ.

೨೫೭೫ ಮಂಡೆ ಬೋಳು, ಕುಂಡೆ ಬತ್ತಲೆ.

೨೫೭೬ ಮಂಡೇ ನೋತಕ್ಕೆ ಕುಂಡೆಗೆ ಲೇಪವೇ.

೨೫೭೭ ಮಂಡೇ ಮೇಲೆ ಹಾಕಿದ ನೀರು ಕಾಲಿಗೆ ಬಾರದೇ.

೨೫೭೮ ಮಂತ್ರ ತಿಳಿಯದಿದ್ದರೂ ತಂತ್ರಕ್ಕೆ ಕಡಿಮೆ ಇಲ್ಲ.

೨೫೭೯ ಮಂತ್ರಿ ಅರಸಾನಕ್ಕೆ, ತಂತ್ರಿ ದೇವಸ್ಥಾನಕ್ಕೆ.

೨೫೮೦ ಮಂತ್ರಿಸಿದರೆ ಮಾವಿನಕಾಯಿ ಬಿದ್ದೀತೇ.

೨೫೮೧ ಮಂಥನದಿಂದ ಬಾರದ ಬೆಣ್ಣೆ ಕಂಥೆಯಿಂದ ಬಂದೀತೇ.

೨೫೮೨ ಮಂದಗಮನೆಗೆ ಮಂದಹಾಸ ಚಂದ, ಮಕ್ಕಳಿಗೆ ಆಟ ಚಂದ.

೨೫೮೩ ಮಂದಿ ಉಳ್ಳವನು ಮಂದನಾದರೆ ಕುಂದು ಬರೋದು ತಪ್ಪದು.

೨೫೮೪ ಮಂದೇ ಬಳಿಗೆ ತೋಳ ಬಂದರೆ ತಂದೇ ಬಳಿಗೆ ವೋಡಿ ಹೋದ.

೨೫೮೫ ಮಕರ ರಾಶಿಗೆ ಗುರು ಬಂದರೆ ಶೂಕರಗೆ ಯೇನು.
೨೫೮೬ ಮಕ್ಕಕ್ಕೆ ಹೋದ ಮದೀನಕ್ಕೆ ಹೋದ ಇದ್ದ ಮಕ್ಕಳನ್ನ ಹೋ
೨೫೮೭ ಮಕ್ಕಕ್ಕೆ ಹೋದರೂ ಠಕ್ಕುತನ ಬಿಡಲಿಲ್ಲ. [ಗಾಡಿಸಿ ಬಂದ.
೨೫೮೮ ಮಕ್ಕಳ ಬಾಯಿಗೆ ಮಣ್ಣು ಸವಿ.
೨೫೮೯ ಮಕ್ಕಳ ಹೇಲು ತಿನ್ನುವವಳು ತುಪ್ಪದ ಗಶಿ ಬಿಟ್ಟಾಳೇ.
೨೫೯೦ ಮಕ್ಕಳಿಗೆಲ್ಲ ಬೆಕ್ಕಿನ ಪಳಿದ್ಯವೇ.
೨೫೯೧ ಮಕ್ಕಳಿಲ್ಲದವರಿಗೆ ವೊಕ್ಕಳಹೊನ್ನು ಇದ್ದರೇನು. [ಹೋಯಿತು.
೨೫೯೨ ಮಕ್ಕಳಿಲ್ಲವೆಂದು ಮೈಲಾರಕ್ಕೆ ಹೋದರೆ ಮೈಯೆಲ್ಲ ಇಳಿಗು
೨೫೯೩ ಮಕ್ಕಳೆಲ್ಲ ಮನೆವಾರ್ತೆ ಮಾಡಿದರೆ ಅಪ್ಪಗ್ಯಾಕೆ ಇಬ್ಬರು ಹೆಂಡರು.
೨೫೯೪ ಮಗನಿಗೆ ಮಾವ ಸತ್ತರೇನು, ಸೊಸೆಗೆ ಅಪ್ಪ ಸತ್ತರೇನು.
೨೫೯೫ ಮಗ ಸೋತರೂ ಜೂಜಿನ ವೊಳವು ಕಲಿತ.
೨೫೯೬ ಮಗಳೇ ಮರುಳಾದೆಯಾ ಇರುಳು ಜಗಳಾಡುವವರ್ಯಾರಮ್ಮ.
೨೫೯೭ ಮಗುವಿನ ಊಟ ಹತ್ತು, ತಾಯಿಾ ಊಟ ವೊಂದು.
೨೫೯೮ ಮಗ್ಗದ ಕುಣಿಯಲ್ಲಿ ಹಗ್ಗವಾದೀತೇ.
೨೫೯೯ ಮಗ್ಗ ನೇಯಲಿಕ್ಕೆ ತಿಳಿಯದಿದ್ದರೂ ಹಗ್ಗ ನೇಯಲಿಕ್ಕೆ ತಿಳಿಯದೇ.
೨೬೦೦ ಮಗ್ಗಿ ಬಾರದವನಿಗೆ ನುಗ್ಗೇಕಾಯಿ ಮದ್ದೇ.
೨೬೦೧ ಮಗ್ಗಿ ಬಾರದಿದ್ದರೆ ಹಾಗೂವೀಸ ಗುಣಿಸು ಅಂದ.
೨೬೦೨ ಮಗ್ಗುಲಲ್ಲಿರುವ ಹಾವು ಕಚ್ಚದೇ ಇದ್ದೀತೇ.
೨೬೦೩ ಮಗ್ಗುಲಲ್ಲಿ ಶಿಶು ಇಟ್ಟುಕೊಂಡು ಹಗಲೆಲ್ಲಾ ಹುಡುಕಿದಳು.
೨೬೦೪ ಮಘೇ ನೀರು ಮೊಗೇಲಿಡು ಅಂದ ಹಾಗೆ.
೨೬೦೫ ಮಚ್ಚೆನಾಲಿಗೆ ಇದ್ದವನ ಸಂಗಡ ಕಚ್ಚಾಟ ಮಾಡ ಬಾರದು.
೨೬೦೬ ಮಜ್ಜನ ನೀಡಲಿಕ್ಕೆ ಹೋಗಿ ಮಜ್ಜಿಗೆ ಕುಡಿದ ಹಾಗೆ.
೨೬೦೭ ಮಜ್ಜಿಗೆಗೆ ಠಕ್ಕ ರಾಮಾಯಣ ಹೇಳಿದ.
೨೬೦೮ ಮಜ್ಜಿಗೆಗೆ ಹೋದವನಿಗೆ ಯೆಮ್ಮೇ ಕ್ರಯವ್ಯಾಕೆ.

೨೬೦೯ ಮಟ್ಟ ನೋಡ ಬೇಕಾದರೆ ಹೆಟ್ಟಿಗೆಯಿಂದ ಆದೀತೇ.
೨೬೧೦ ಮಟ್ಟ ಹಾಕದೆ ಕೆತ್ತ ಕೂಡದು, ಕಟ್ಟಿಸದೆ ಹೊರ ಕೂಡದು.
೨೬೧೧ ಮಟ್ಟ ಇಟ್ಟರೂ ಕೊಟ್ಟತನ ಹೋಗಲಿಲ್ಲ.
೨೬೧೨ ಮಟ್ಟು ತಿಳಿದ ನಾಯಿ ಹಟ್ಟೀಲಿದ್ದೀತೇ.
೨೬೧೩ ಮಟ್ಟು ತಿಳಿದವನ ಸಂಗಡ ಹೆಟ್ಟ್ಯಾಟ ಮಾಡ ಬಾರದು.
೨೬೧೪ ಮಟ್ಟು ತಿಳಿಯದೆ ಮಾತಾಡ ಬಾರದು.
೨೬೧೫ ಮಠದ ಮಾಳಿಗೇ ಯೇರದವ ಘಟ್ಟ ಹತ್ತ್ಯಾನೇ.
೨೬೧೬ ಮಠಪತಿಯಾದರೂ ಶಟತನ ಬಿಡಲಿಲ್ಲ.
೨೬೧೭ ಮಡದಿ ಇಲ್ಲದವನ ಸಂಗಡ ಮಕ್ಕಳು ಯೆಷ್ಟು ಯೆಂತ ಕೇಳಿದ.
೨೬೧೮ ಮಡಲು ತಿಂದರೆ ಮೊಡಲು ತುಂಬೀತೇ.
೨೬೧೯ ಮಡಿ ಉಟ್ಟರೂ ಮಡ್ಡತನ ಬಿಡಲಲ್ಲ.
೨೬೨೦ ಮಡಿ ಉಟ್ಟರೂ ಮೈಲಿಗೆ ಬಿಡಲಿಲ್ಲ.
೨೬೨೧ ಮಡಿಕೆ ಮೊಡಿಯ ಬೇಕಾದರೆ ಆಡಿಕೇಮರ ಬೇಕೇ.
೨೬೨೨ ಮಡಿಕೆ ಮಾರುವವನಿಗೆ ದುಡುಕಿನ ಗೌಜಿ ಯಾಕೆ.
೨೬೨೩ ಮಡಿದು ಹೋಗುವಾಗ್ಯೆ ಮಡದಿ ಗೊಡವೆ ಯಾಕೆ.
೨೬೨೪ ಮಡಿಯೊಳಗೆ ಇಟ್ಟರೂ ಹಡಿಕೆ ನಾತ ಹೋಗಲಿಲ್ಲ.
೨೬೨೫ ಮಡಿಲು ತುಂಬಿಸಿದರೆ ಹಡಿಯದೆ ಇದ್ದಾಳೋ.
೨೬೨೬ ಮಡ್ಡನಾದರೆ ಗಡ್ಡ ಹೊತ್ತದೇ.
೨೬೨೭ ಮಡ್ಡಿ ಅನ್ನಕ್ಕೆ ಗೊಡ್ಡು ಸಾರು.
೨೬೨೮ ಮಡ್ಡಿ ತಿನ್ನದ ಯೆಮ್ಮೆ ಗೊಡ್ಡು ಆದೀತೇ.
೨೬೨೯ ಮಡ್ಡು ಹುಲ್ಲು ಗೊಡ್ಡು ಯೆಮ್ಮೆಗೆ.
೨೬೩೦ ಮಣಗದ ಮನುಷ್ಯ ಹೆಣಗಿದರೂ ಬಗ್ಗ.
೨೬೩೧ ಮಣವಿಲ್ಲದೆ ಖಂಡಿ ಇಲ್ಲ, ಹಣವಿಲ್ಲದೆ ವರಹವಿಲ್ಲ.
೨೬೩೨ ಮಾಣಾ ತೂಗದ ತ್ರಾಸು ಖಂಡಿ ತೂಗೀತೇ.

೨೬೩೩ ಮಣಿಯಗಾರನ ಹಂಗು ಹಣಗಾರನಿಗೂ ಬೇಕು. [ಟ್ಟಾನೇ.
೨೬೩೪ ಮಣಿಯಗಾರನಿಗೆ ದುಃಖ ಸುಃಖ ಹೇಳಿದರೆ ಮಣುವಿನ ಲೆಖ್ಖ ಬಿ
೨೬೩೫ ಮಣೇಸರಕ್ಕೆ ಗತಿ ಇಲ್ಲದವ ಹಣ ದಕ್ಷಿಣೆ ಕೊಟ್ಟಾನೇ.
೨೬೩೬ ಮಣೆ ಕಾಣದವ ಮಾಳಿಗೆ ಕಂಡಾನೇ.
೨೬೩೭ ಮಣೇಲಿ ಕುಂದ್ರಲಿಕ್ಕೆ ಹಣೇಲಿಲ್ಲದವ ಸಿಂಹಾಸನ ಯೆರ್ಯಾನೇ.
೨೬೩೮ ಮಣ್ಣು ಕಾಲು ನೀರಿಗೆ ಆಗದು, ಮರದ ಕಾಲು ಬೆಂಕಿಗೆ ಆಗದು.
೨೬೩೯ ಮಣ್ಣು ದೇವರಿಗೆ ಮಜ್ಜನವೇ ಸಾಕ್ಷಿ.
೨೬೪೦ ಮಣ್ಣು ಹೊಯಿದು ಅಂಬಲಿ ಕಾಸಿದರೆ ಉಂಬೋಕಾದೀತೇ.
೨೬೪೧ ಮಣ್ಣು ಹೊರುವವನು ತಲೆಗೆ ಬೆಂಣೆ ಹಚ್ಚಿಕೊಂಡಂತೆ.
೨೬೪೨ ಮತಕ್ಕೆ ಭೇದವಾದರೆ ನೀತಿಗೆ ಭೇದವೇ.
೨೬೪೩ ಮತದ ಸ್ವರೂಪ ಕೋತಿ ಬಲ್ಲದೇ.
೨೬೪೪ ಮತ ಬಿಟ್ಟರೂ ಮದ ಬಿಡಲಿಲ್ಲ.
೨೬೪೫ ಮತಿ ಇದ್ದವನಾದರೆ ಗತಿ ನೋಡನೇ.
೨೬೪೬ ಮತಿ ಇಲ್ಲದವಗೆ ಗತಿ ಇಲ್ಲ.
೨೬೪೭ ಮತಿ ಇಲ್ಲದೆ ಮಾತಾಡಿದರೆ ಕತೆಗೆ ಕಾರಣ.
೨೬೪೮ ಮತ್ತನಾದವನ ಹತ್ತರ ಕತ್ತಿ ಇದ್ದರೇನು.
೨೬೪೯ ಮತ್ತೆ ಹುಟ್ಟಿದ ಕೋಡಿಗಿಂತ ಮುಂಚೆ ಇರುವ ಕಿವಿಯೇ ವಾಸಿ.
೨೬೫೦ ಮಥನ ಕಾಲದಲ್ಲಿ ಕಥೆ ಕೇಳುವದುಂಟೇ.
೨೬೫೧ ಮದವಣಿಗಿತ್ತಿಗೆ ಕಾವಲಿಗೆ ಕಳುಹಿಸಿದ ಹಾಗೆ.
೨೬೫೨ ಮದುವೆಗೆ ತಂದ ಅಕ್ಕಿ ಶೇಸೆಗೆ ತೀರಿ ಹೋಯಿತು.
೨೬೫೩ ಮದುವೇ ಮನೇಲಿ ಅನ್ನವಿಕ್ಕಿ ಹಿತವ ಪಡದ ಹಾಗೆ. [ತ್ತರು.
೨೬೫೪ ಮದುವೇ ಮನೇಲಿ ತೋವೆಗತ್ತರು, ಗೌರಿ ಹಬ್ಬದಲ್ಲಿ ಕಾಯಿಗ
೨೬೫೫ ಮದುವೇ ಮುಗಿದರೂ ಮದುಮಗನ್ನ ನೋಡಲಿಲ್ಲ.
೨೬೫೬ ಮದ್ದು ತಿಳಿದವನಾದರೆ ಪೊದ್ದಿದ ಪೆಟ್ಟು ಹೋದೀತೇ.

೨೬೫೭ ಮದ್ದು ಸುಡುವಲ್ಲಿ ಹದ್ದಿಗೇನು.
೨೬೫೮ ಮಧ್ಯಸ್ಥ ಇಲ್ಲದ ಊರಲ್ಲಿ ಮಧ್ಯಾನ ಇರ ಬಾರದು.
೨೬೫೯ ಮಧ್ಯಾನ ತಿಳಿಯದವ ಗದ್ಯಾನದ ನೋಟ ಬಲ್ಲನೇ.
೨೬೬೦ ಮನವರಿಯದ ಪಾಪವಿಲ್ಲ, ತನುತಿಳಿಯದ ನೋವಿಲ್ಲ.
೨೬೬೧ ಮನವಿಲ್ಲದ ಮನವಾರ್ತೆ, ಧನವಿಲ್ಲದ ಐಶ್ವರ್ಯ.
೨೬೬೨ ಮನೆ ಕಟ್ಟ ಬಹುದು; ಮನಸು ಕಟ್ಟ ಕೂಡದು.
೨೬೬೩ ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು.
೨೬೬೪ ಮನೆಗೆ ವೊಂದು ಮುದುಕಿ, ವೊಲೆಗೆ ವೊಂದು ಕುಂಟೆ.
೨೬೬೫ ಮನೆಗೆ ಬಂದ ಮರುಳು ಲೇಸು.
೨೬೬೬ ಮನೆಗೆ ಮಾರಿ, ಪರೋಪಕಾರಿ.
೨೬೬೭ ಮನೆ ಬಲ್ಲೆ, ದಾರಿ ಅರಿಯೆ.
೨೬೬೮ ಮನೆ ಮನೆ ತಿರುಗುವ ತೊತ್ತು ಮಾತು ತಾರದೆ ಬಿಟ್ಟಾಳೇ.
೨೬೬೯ ಮನೆಯ ದೀಪವಾದರೆ ಮುತ್ತು ಕೊಡ ಬಹುದೇ.
೨೬೭೦ ಮನೇ ತಿಂಬುವವನಿಗೆ ಕದ ಹಪ್ಪಳಸಂಡಿಗೆ.
೨೬೭೧ ಮನ್ನಣೆ ಸಿಕ್ಕದಿದ್ದರೆ ತಲ್ಲಣಗೊಳ್ಳ ಬಹುದೇ.
೨೬೭೨ ಮರಕು ಇಲ್ಲದ ಹೆಂಡತಿಗಿಂತ ಮರದ ನೆರಳು ಸುಖ.
೨೬೭೩ ಮರವೇರಿ ಕೈ ಬಿಟ್ಟ ಹಾಗೆ.
೨೬೭೪ ಮರಳಿ ಮರಳಿ ಮಂಚಕ್ಕೆ ಕಾಲು ಯೆಷ್ಟು ಯೆಂತ ಕೇಳಿದ.
೨೬೭೫ ಮರಾಟರ ಹತ್ತರ ಹೋರಾಟ ಸಲ್ಲ.
೨೬೭೬ ಮರಿಮಗನಾದರೆ ಹರಗೋಲು ಸುಮ್ಮಗೆ ದಾಟಿಸ್ಯಾನೇ.
೨೬೭೭ ಮರುಳಿಗೆ ಇರುಳಿಲ್ಲ, ಪಿತ್ಥದವಗೆ ನಿದ್ರೆ ಇಲ್ಲ.
೨೬೭೮ ಮಲ್ಯರಂಡೆ ಅಂದರೆ ಉಲ್ಲಾಸಿಸಿ ಕೊಂಡು ಹೋದ ಹಾಗೆ.
೨೬೭೯ ಮಳೆ ಇಲ್ಲದ ಪೈರೂ ಮಾತೆ ಇಲ್ಲದ ಕೂಸೂ ಸಮ.
೨೬೮೦ ಮಳೆಗೆ ಹೆದರಿ ಹೊಳೇಲಿ ಹಾರಿದ ಹಾಗೆ.

೨೬೮೧ ಮಳೇ ತಡಿಸದ ಕೊಡೆ ಸಿಡಿಲ ತಡಿಸೀತೇ.
೨೬೮೨ ಮಳೇ ನೀರು ಬಿಟ್ಟು ಮಂಜಿನ ನೀರಿಗೆ ಕೈ ವೊಡ್ಡಿದ ಹಾಗೆ.
೨೬೮೩ ಮಳೇ ಹನಿ ಬಿಟ್ಟರೂ ಮರದ ಹನಿ ಬಿಡಲಿಲ್ಲ.
೨೬೮೪ ಮಾಘ ಸ್ನಾನಕ್ಕೆ ಹೋಗಿ ನಿತ್ಯ ಸ್ನಾನ ಪೂಜ್ಯ.
೨೬೮೫ ಮಾಡ ಬಾರದ್ದು ಮಾಡಿದರೆ ಆಗ ಬಾರದ್ದಾಗುವದು.
೧೬೮೬ ಮಾಡಿದ ಸೇವೆ ದಂಡಕ್ಕೆ ಸಾಲದು. [ಗ್ನಿ ಹಾಕುತ್ತಾನೆ.
೨೬೮೭ ಮಾಡಿ ಮಾಡಿ ಮಡಕೆ ತುಂಬುತ್ತಾನೆ, ನೋಡಿ ನೋಡಿ ಬಾಯ
೨೬೮೮ ಮಾಡುವವರ ಕಂಡರೆ ನೋಡು ನನ್ನ ಸಿರಿಯೇ ಅಂದ ಹಾಗೆ.
೨೬೮೯ ಮಾಡುವವರ ಮುಂದೆ ಹೊಡಿಯುವವರ ಹಿಂದೆ ನಿಲ್ಲ ಬೇಕು.
೨೬೯೦ ಮಾಡೋದು ದುರಾಚಾರ, ಮನೇ ಮುಂದೆ ವೃಂದಾವನ.
೨೬೯೧ ಮಾಣಿಕ್ಯವನ್ನು ಮಸಿ ಅರವೇಲಿ ಕಟ್ಟಿದ ಹಾಗೆ.
೨೬೯೨ ಮಾಣೀಕೇಡು ಕಂಡಲ್ಲದೆ ಬೆಳ್ಳಿ ಮೂಡ.
೨೬೯೩ ಮಾತಿಗೆ ಮೊದಲೇ ಗಾದೆ, ಊಟಕ್ಕೆ ಮೊದಲೇ ಉಪ್ಪಿನ ಕಾಯೋ.
೨೬೯೪ ಮಾತು ಕೊಂಡುಹೋದವ ಉಂಡು ಬಂದ, ಮಾಣಿಕ್ಯ ಕೊಂ
ಡುಹೋದವ ಹಸ್ತು ಬಂದ.
೨೬೯೫ ಮಾತು ಬಂದಾಗ ಸೋತು ಹೋದವನೇ ಜಾಣ.
೨೬೯೬ ಮಾತು ಬಲ್ಲಿವ ಮಾಣಿಕ ತಂದ, ಮಾತರಿಯದವ ಝಗಳ ತಂದ.
೨೬೯೭ ಮಾದಿಗನ ಮನೇಲಿ ಪರಮಾನ್ನವಿದ್ದರೆ ಹಾದೀಲಿ ಹೋಗೋ
೨೬೯೮ ಮಾನದಲ್ಲಿ ಆನೆ ಹಿಡಿದೀತೇ. [ರಗೇನು.
೨೬೯೯ ಮಾನ ಹೋಗದ ಹಾಗೆ ಬಟ್ಟೆ, ಪ್ರಾಣ ಹೋಗದ ಹಾಗೆ ಅನ್ನ.
೨೭೦೦ ಮಾನ ಹೋದ ಮೇಲೆ ಮರಣವಾದ ಹಾಗೆ.
೨೭೦೧ ಮಾನ ಹೋದರೂ ಮರಿಯಾದಿ ಹೋಗಲಿಲ್ಲ.
೨೭೦೨ ಮಾಯ ಮಾಡುವವರಿಗೆ ಮಾರಿ ಬಲ್ಲಳು.
೨೭೦೩ ಮಾರಿಯ ಕಣ್ಣು ಹೋತನ ಮೇಲೆ.

೨೨೦೪ ಮಾರಿಯ ಮನೆಗೆ ಹೋತ ಕನ್ನಾ ಕೊರದ ಹಾಗೆ.
೨೨೦೫ ಮಾರ್ಯಮ್ಮ ಅರಿಯದ ಕೋಣವೇ.
೨೨೦೬ ಮಾಸಿದಕ್ಕೆ ಹೆದರದವಳು ಮೊಸರಿಗೆ ಹೆದರ್ಯಾಳೇ.
೨೨೦೭ ಮಿಗಿಲಾದವನ ಹತ್ತರ ಹಗೆ ಸಲ್ಲ, ನಗೆಗಾರನ ಹತ್ತರ ಮೈತ್ರಿ ಸಲ್ಲ.
೨೨೦೮ ಮಿಣ್ಣಾಗಿದ್ದವನ ಬಣ್ಣವೇ ಬೇರೆ.
೨೨೦೯ ಮಿತಿ ಮೀರಿದರೂ ಗತಿ ಮೀರಬೇಕು.
೨೨೧೦ ಮೀನು ನೀರಲ್ಲಿ ಮುಣುಗಿದರೆ ಸ್ನಾನದ ಫಲ ಬಂದೀತೇ.
೨೨೧೧ ಮುಂಡೆಗೆ ಗಂಡ ಬಾಳನು, ಮೂಳ ಕಿವಿಗೆ ವೋಲೆ ಬಾಳದು.
೨೨೧೨ ಮುಂಡೆಗೆ ಮುಂದೆ ಕಂಡರೆ ಉಂಡಷ್ಟು ಸಂತೋಷ.
೨೨೧೩ ಮುಂಡೆ ಹೆತ್ತು ಗುಂಡಿಗೆ ಹಾಕಿದ ಹಾಗೆ.
೨೨೧೪ ಮುಂಡೇ ಮದುವೆಗೆ ಮೂವತ್ತು ವಿಘ್ನ.
೨೨೧೫ ಮುಂಡೇ ಮದುವೆಯಲ್ಲಿ ಉಂಡವನೇ ಜಾಣ.
೨೨೧೬ ಮುಂದಣ ಬುದ್ಧಿ ತಪ್ಪಿದರೆ ಮೂರು ದಾರಿಯ ಮಣ್ಣೇ.
೨೨೧೭ ಮುಂದಿನ ಮುಕ್ತಿಕಿಂತ ಈಗಿನ ಭುಕ್ತಿ ಲೇಸು.
೨೨೧೮ ಮುಕ್ತಿಯಾದರೂ ಶಕ್ತಿಯಿಂದ ಸಿಕ್ಕೀತೇ.
೨೨೧೯ ಮುಚ್ಚಿ ಇಟ್ಟರೆ ಹುಚ್ಚು ಹೋದೀತೇ.
೨೨೨೦ ಮುಟ್ಟಿದ ಕೈಗೆ ಪೆಟ್ಟು, ಕಟ್ಟಿದ ಹೊರೆಗೆ ಧಿಟ್ಟ.
೨೨೨೧ ಮುಡಿ ಕಟ್ಟಿ ಆಯಿತು, ಬುಟ್ಟಿ ಕೊಂಡು ಬಾ.
೨೨೨೨ ಮುತ್ತಿನ ಚವು ಕತ್ತೆಗೆ ತಿಳದೀತೇ.
೨೨೨೩ ಮುತ್ತಿನಷ್ಟು ಗಂಡ ಇದ್ದರೆ ಬೆಟ್ಟದಷ್ಟು ಮಕ್ಕಳ ಹೆರುವೆನು.
೨೨೨೪ ಮುತ್ತು ಕೆಟ್ಟರೆ ಭತ್ತಕ್ಕಿಂತ ಕಡೆಯಾದೀತೇ.
೨೨೨೫ ಮುತ್ತು ಹುಟ್ಟೋದು ಚಿಪ್ಪಿನಲ್ಲೇ.
೨೨೨೬ ಮುತ್ತೈದೇ ಕೈ ಭಿಕ್ಷ ಮೂರು ಹಿಡಿ ಸಾಕು.
೨೨೨೭ ಮುದಿ ಜೋಂಬನ ಲಾಗ.

೨೭೨೮ ಮುದುಕನಾದರೂ ತದಕು ಬಿಡಲಿಲ್ಲ.

೨೭೨೯ ಮುದ್ದೆ ಕಬ್ಬಿಣ ಮುಣುಗುವದು, ಬಿಲ್ಲೇ ಕಬ್ಬಿಣ ತೇಲುವದು.

೨೭೩೦ ಮುದ್ದೆಗೆ ಯೆದ್ದು, ಗುದ್ದಲಿಗೆ ಬಿದ್ದ.

೨೭೩೧ ಮುದ್ದೆ ಬೆಲ್ಲವಾದರೆ ಮದ್ದಿಗೆ ಆಗದೇ.

೨೭೩೨ ಮುದ್ದೆಲ್ಲಾ ಮೂರನೆ ಹೆಂಡತಿಗೆ.

೨೭೩೩ ಮುದ್ರಿಕೆಲ್ಲದ ಮುನ್ನೂರು ಪದ.

೨೭೩೪ ಮುಪ್ಪಾದ ಮೇಲೆ ಮೂರು ದಿನವಿರ ಬಾರದು.

೨೭೩೫ ಮುರುಕು ಇದ್ದವಗೆ ನರಕ ತಪ್ಪದು.

೨೭೩೬ ಮುರುವಿಗೆ ಬಗೆ ಇಲ್ಲದಿದ್ದರೆ ಹರವಿಗೂ ದರಿದ್ರವೇ.

೨೭೩೭ ಮುಳ್ಳು ತೆಗದು ಕೊಳ್ಳಿ ಹೆಟ್ಟಿದ ಹಾಗೆ.

೨೭೩೮ ಮುಳ್ಳು ಮೊನೆಯಷ್ಟು ಆಸ್ಪದ ಕೊಡದವನ ತಲ್ಲಿಗೆ ಹೋಗ [ಬೇಡ.

೨೭೩೯ ಮೂಕನ ಸ್ವಪ್ನ ಹೇಳಲಿಕ್ಕೆ ತಿಳೆಯದು, ಹೇಳದೆ ತೀರದು.

೨೭೪೦ ಮೂಕನೆದುರಿಗೆ ಮೂಗು ತುರಿಸಿ ಕೊಂಡ ಹಾಗೆ.

೨೭೪೧ ಮೂಗುಗಿಂತ ಮೂಗುತಿ ಭಾರ.

೨೭೪೨ ಮೂಗಿನ ಮೇಲೆ ಮಶಿ ಅಂದರೆ ಕೋಪ.

೨೭೪೩ ಮೂಗಿಲ್ಲದವಳಿಗೆ ಮೂಗುತಿ ಯಾಕೆ.

೨೭೪೪ ಮೂಗು ಕೊಯಿದು ಕೊಂಡು ಅವಲಕ್ಷಣ ಅನ್ನಿಸಿ ಕೊಂಡ ಹಾಗೆ.

೨೭೪೫ ಮೂಡಣ ಸಂತೆಗೆ ಹೋಗ ಬೇಡ, ಮುಂಡೇ ಮಗಳನ್ನು ತರ ಬೇಡ.

೨೭೪೬ ಮೂಢಗೆ ಹೇಳಿದ ಬುದ್ಧಿ, ಆಡಿಗೆ ಹಾಕಿದ ಮೇವು.

೨೭೪೭ ಮೂಢ ಭಕ್ತಿಗೆ ಕೇಡಿಲ್ಲ, ಮೂಡೆ ರಾಗಿಗೆ ಭಯವಿಲ್ಲ.

೨೭೪೮ ಮೂರು ದಿನದ ಬಾಳಿಗೆ ಆರು ಜೋಡು ವೋಲೆ.

೨೭೪೯ ಮೂರು ನಾಮದವ ಸ್ವರ್ಗಕ್ಕೆ ಹೋದರೆ ಹನ್ನೆರಡು ನಾಮದವ ಯೆಲ್ಲಿ ಹೋದಾನು.

೨೭೫೦ ಮೂರ್ಖಗೆ ಹೇಳಿದ ಬುದ್ಧಿ, ಘೋರ್ಕಲ್ಲ ಮೇಲೆ ಹೊಯಿದ ಮಳೆ.

೨೭೫೧ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು.
೨೭೫೨ ಮೂಲ ತಿಳಿದವಗೆ ಮೇಲೆ ತೋರಿಸ ಬೇಡ.
೨೭೫೩ ಮೂಲೆಗೆ ಇಡುವಂಥಾದ್ದು ಮಧ್ಯದಲ್ಲಿಡ ಬಾರದು.
೨೭೫೪ ಮೂವತ್ತು ವರುಷದ ವರೆಗೆ ಮದುವೆ ಆಗದವಳಿಲ್ಲ ಮೂರು
ಝೂವಕ್ಕೆ ಊಟ ಆಗದವನಿಲ್ಲ.
೨೭೫೫ ಮೂವರ ಕಿವಿಗೆ ಮುಟ್ಟಿದ್ದು ಮೂರು ಲೋಕಕ್ಕೆ ಮುಟ್ಟುವದು.
೨೭೫೬ ಮೂವರು ಹೊತ್ತ ಭಂಡಿ ಹೊಲಕ್ಕೆ ಹೋಗದು, ಮನೆಗೆ ಬಾರದು.
೨೭೫೭ ಮೂಸಿ ನೋಡಿದರೆ ಹೂಸಿನನಾತ ಹೋದೀತೇ. [ಯಿತು.
೨೭೫೮ ಮೂಳೀ ಮೂಗುತಿ ಹೋದ ದೆಶೆಯಿಂದ ಮೂಲೇ ಕಸವೆಲ್ಲ ಹೋ
೨೭೫೯ ಮೆಂತೆ ತಿಂದಾಕ್ಷಣ ಕುಂತೀ ಮಗನಾದಾನೇ.
೨೭೬೦ ಮೆಚ್ಚಿದವನಿಗೆ ಮಸಣವೇ ಸುಖ.
೨೭೬೧ ಮೆಟ್ಟಿದಲ್ಲದೆ ಹಾವು ಕಡಿಯದು.
೨೭೬೨ ಮೆಟ್ಟಿದಾಕ್ಷಣ ಘಟ್ಟ ತಗ್ಗೀತೇ.
೨೭೬೩ ಮೆಟ್ಟೀ ಅಂದರೆ ತಿಂದರೇನು ಕೊಟ್ಟೆ ಅಂದ.
೨೭೬೪ ಮೆಣಸು ಕೊಳ್ಳತರೆ ಜೋಳಕ್ಕಿಂತ ಕಡೆಯೇ. [ತ್ತಾನೆ.
೨೭೬೫ ಮೆದೇ ಹುಲ್ಲು ಸೂರೆಯಾಗುತ್ತದೆ, ಹಿಡಿ ಹುಲ್ಲಿಗೆ ವೊದ್ದ್ಯಾಡು
೨೭೬೬ ಮೆಲ್ಲಕ್ಕೆ ಉಣ್ಣು ಮಲನಾಡಿಗೆ ಹೋಗಿ ಬರುತ್ತೇನೆ ಅಂದ.
೨೭೬೭ ಮೇಘ ನೋಡಿ ನವಿಲು ಕುಣಿದರೆ ಗೂಗೆಯು ನೋಡಿ ಕೋಳಿ
ಕುಣಿಣೀತಂತೆ.
೨೭೬೮ ಮೋದಮೇಟೂ ಹೋದ ಹೆಜ್ಜೆಯೂ ಕಾಣುವದಿಲ್ಲ.
೨೭೬೯ ಮೋಲಿನ ಮೋಡ ನೋಡಿ ವರ್ತನೇ ಭಾವಿಯಲ್ಲು ಉಚ್ಚೆ ಹೊ
ಯಿದ ಹಾಗೆ. [ಡಿಯಾ.
೨೭೭೦ ಮೇಲು ಗೋಟೀ ಜಾತ್ರೆಯಲ್ಲಿ ನನ್ನ ಬೋಡ ದಾಸಯ್ಯನ ಕಂ
೨೭೭೧ ಮೇಲು ಮಾಡಿದರೆ ಕೀಳು ಆಗುವದು.

೨೭೭೨ ಮೇಲೆ ಬಿದ್ದ ಸರ್ಕಿಗೆ ಹಾಗದ ಕಾಸು.
೨೭೭೩ ಮೇಳ ಕೂಡಿಸದೆ ತಾಳ ಬಡಿದ ಹಾಗೆ.
೨೭೭೪ ಮೈ ಬೆಳ್ಳಗಾದವನ ನೆರಳು ಬೆಳ್ಳಗೆಯೇ.
೨೭೭೫ ಮೈ ಯೆಲ್ಲ ಚೆನ್ನ, ಕಿವಿ ಮಾತ್ರ ಹಿತ್ತಾಳಿ. [ಮೇಲು.
೨೭೭೬ ಮೈಯಲ್ಲಿ ಹುಟ್ಟಿದ ರೋಗಕ್ಕಿಂತ ಕಾಡಿನಲ್ಲಿ ಹುಟ್ಟಿದ ಔಷದ
೨೭೭೭ ಮೊಂಡನ ಕೊಂದವರಿಲ್ಲ, ನಾಯಿಯ ತಿಂದವರಿಲ್ಲ.
೨೭೭೮ ಮೊಗೆ ಮಾಡದ ಕುಂಬಾರ ಗುಡಾಣ ಮಾಡ್ಯಾನೇ.
೨೭೭೯ ಮೊಟ್ಟೆ ಕಟ್ಟಲಿಕ್ಕೆ ತಿಳಿಯದವ ಹೊಟ್ಟೆ ಕಟ್ಟ್ಯಾನೇ.
೨೭೮೦ ಮೊಣಕಾಲು ಊರಲಿಕ್ಕೆ ತಿಳಿಯದವ ಮೊಳಕೈಯಿಂದ ನಿತ್ತಾನೇ.
೨೭೮೧ ಮೊದಲು ದೇವರು ಮೂರೇಲಿದ್ದರೂ ಹನುಮಂತರಾಯಗೆ ದೀ
೨೭೮೨ ಮೊದಲು ಮಳೆ, ಆಮೇಲೆ ಕೊಳೆ. [ಪೋತ್ಸಹವು.
೨೭೮೩ ಮೊಮ್ಮಗನಾದರೆ ಗುಮ್ಮನ ಹಾಗಿರ ಬೇಕೋ.
೨೭೮೪ ಮೊರದಿಂದ ಕತ್ತಲೆಯನ್ನು ಹೊರ ಹಾಕ ಬಹುದೇ.
೨೭೮೫ ಮೊಲದ ಕಣ್ಣು ಬೇಟೆಗಾರಗೆ ಮುದ್ದೇ
೨೭೮೬ ಮೊಸರು ಹುಳಿ ಯೆಂತ ಹಸುರುಹುಲ್ಲಿ ಹಿಂಡಿದನಂತೆ.
೨೭೮೭ ಮೊಸಳೆಗೆ ಉಪಕಾರಾ ಮಾಡಿ ನಶಿಸಿ ಹೋದ ಹಾಗೆ.
೨೭೮೮ ಮೊಳ ಕೈಯಾಡಿದರೆ ಮುಂಗೈಯಾಡುತ್ತದೆ.
೨೭೮೯ ಮೊಳೆ ಮಾಡಲಿಕ್ಕೆ ತಿಳಿಯದ ಕಮ್ಮಾರ ಮಲಸುತ್ತಿ ಮಾಡ್ಯಾನೇ.
೨೭೯೦ ಮೋಟ ಮರ ಘಾಳಿಗೆ ಮಿಂಡ
೨೭೯೧ ಮೋಡ ಕಂಡು ವೋಡಿದ ಬಾಗೆ.
೨೭೯೨ ಮೋರೆ ಕಂಡರೆ ತಿಳಿಯೋದಿಲ್ಲವೇ ಅಂದ ಹಾಗೆ.
೨೭೯೩ ಮೋರೆ ಕಂಡರೆ ಮನಸು ಇಳಿದೀತೇ.
೨೭೯೪ ಮೋಸಗಾರನ ಮನಸು ಮಹೇಶ್ವರ ಬಲ್ಲ.
೨೭೯೫ ಮೋಸ ಯಾರ ದಾಸನಲ್ಲ.

೨೭೯೬ ಮೋಕ್ಷ ಸಿಕ್ಕ ಬೇಕಾದರೆ ಭಕ್ಷ ತಿನ್ನ ಬೇಕೇ.
೨೭೯೭ ಮೌನಂ ಸರ್ವತ್ರ ಸಾಧನಂ.
೨೭೯೮ ಯಥಾರಾಜ ತಥಾಪ್ರಜಾ. [ತೂಗಿದರೆ ಪಗಡಿ ಬಿತ್ತು.
೨೭೯೯ ಯಾತ ತಲೆ ತೂಗಿದರೆ ಪಾತಾಳದ ನೀರು ಬಂತು, ತಾತ ತಲೆ
೨೮೦೦ ಯಾತ್ರೆಗೆ ಹೋದರೂ ಪಾತ್ರೆ ಬಿಡಲಿಲ್ಲ.
೨೮೦೧ ಯಾತ್ರೆಗೆ ಹೋದಾಕ್ಷಣ ಮಾತ್ರೆ ಗುಣ ತಿಳಿದೀತೇ.
೬೮೦೨ ಯಾರಿಗೆ ನಿತ್ತರೂ ಬೊಮ್ಮ ಭಟ್ಟಗೆ ನಿಲ್ಲಲಿಲ್ಲ.
೨೮೦೩ ಯಾರಿಗೆ ಯಾರಿಲ್ಲ, ದಾರಿಗೆ ಸುಂಕವಿಲ್ಲ.
೨೮೦೪ ಯಾರಿಗೆ ಶರಣು ಬಿದ್ದರೂ ಮರಣದ ಭಯ ತಪ್ಪದು.
೨೮೦೫ ಯಾರೂ ಇಲ್ಲದ ಊರಿಗೆ ಅಗಸರ ಮೂಳಿಯೇ ಮುತ್ತೈದೆ.
೨೮೦೬ ಯಾರೂ ಇಲ್ಲದ ಊರಿಗೆ ಹೋಗಿ ನೀರು ಮಜ್ಜಿಗೆ ಬಯಸಿದ ಹಾಗೆ.
೨೮೦೭ ಯಾವ ದೇವರು ವರಾ ಕೊಟ್ಟರೂ ಗಂಡನಿಲ್ಲದೆ ಮಕ್ಕಳಾಗದು.
೨೮೦೮ ಯಾವ ರಾಯರಿಗೆ ರಾಜ್ಯವಾದರೂ ರಾಗಿ ಬೀಸೋದು ತಪ್ಪೋ
೨೮೦೯ ಯುಕ್ತಿಯ ಮಾತು ಮಕ್ಕಳಿಂದಾದರೂ ತಿಳುಕೊ. [ದಿಲ್ಲ.
೨೮೧೦ ಯೆಣ್ಣೆದ್ದು ಮಣ್ಣು ಆಯಿತು, ಹೆತ್ತದ್ದು ಹೆಣ್ಣು ಆಯಿತು.
೨೮೧೧ ಯೆಣ್ಣೆ ಮಾರುವವನಿಗೆ ಸಣ್ಣೆ ಯಾಕೆ.
೨೮೧೨ ಯೆತ್ತ ಬಿದ್ದರೂ ತಿಂಬೋಕುಂಟು.
೨೮೧೩ ಯೆತ್ತ ಹೋದರೂ ಮೃತ್ಯು ಬಿಡದು.
೨೮೧೪ ಯೆದ್ದರೆ ಕೆಟ್ಟೆ ಅಂದ ಹಾಗೆ.
೨೮೧೫ ಯೆದ್ದವನು ಗೆದ್ದಾನು.
೨೮೧೬ ಯೆಮ್ಮೆ ಕರಿತೋ, ಪುಣ್ಯಾ ಕರಿತೋ. [ಬೇಕು.
೨೮೧೭ ಯೆಮ್ಮೇಕರು ಸಾಯ ಬೇಕು, ಹಿರೇ ಮಗಳ ಗಂಡ ಸಾಯ
೧೮೧೮ ಯೆರಕ ಹೊಯಿದರೂ ನರಕ ತಪ್ಪದು.
೨೮೧೯ ಯೆರದು ಕೊಟ್ಟ ಮೇಲೆ ತಿರುಗ ಕೇಳ ಬೇಡ.

೨೮೨೦ ಯೆಲು ಇಲ್ಲದ ನಾಲಿಗೆ ಹ್ಯಾಗೂ ಬೊಗಳುತ್ತದೆ.
೨೮೨೧ ಯೆಲೆ ಮೆಲಲಿಕ್ಕಿಲ್ಲವೆಂದು ತಲೆ ಅಲ್ಲಾಡಿಸಿದ ಹಾಗೆ.
೨೮೨೨ ಯೆಲ್ಲದಕ್ಕೆ ಬಡತನವಾದರೆ ಹಿಡಿತುಂಬ ಗಡ್ಡಕ್ಕೂ ಬಡತನವೇ.
೨೮೨೩ ಯೆಲ್ಲರ ಮನೇಲಿ ದೋಸೆಗೆ ತೂತು, ನಮ್ಮಲ್ಲಿ ಕಾವಲಿಗೇ ತೂತು.
೨೮೨೪ ಯೆಲ್ಲರೂ ಗೋಕರ್ಣಕ್ಕೆ ಹೋದರೆ ಗೋಕರ್ಣದವರು ಗಾಳಕ್ಕೆ ಹೋದರು.
೨೮೨೫ ಯೆಲ್ಲರೂ ಪಾಲಿಕೀಲಿ ಕೂತರೆ ಹೊರೋರು ಯಾರು.
೨೮೨೬ ಯೆಲ್ಲರೂ ಹೆಣ್ಣು ಹೆತ್ತರೆ ಮಾರಮ್ಮ ಮರಿಗೆ ಹೆತ್ತಳು.
೨೮೨೭ ಯೆಲ್ಲಾ ದೋಷ ಬೆಲ್ಲದಲ್ಲಿ ಪರಿಹಾರ.
೨೮೨೮ ಯೆಳ್ಳೇ ಮರುಳೊ ಯೆಪ್ಪತ್ತೇ ಮರುಳೊ.
೨೮೨೯ ಯೆಳ್ಳೇಲಿ ಬರಲೊ ಮುಪ್ಪಿಲಿ ಬರಲೊ.
೨೮೩೦ ಯೋಗವಿದ್ದಷ್ಟು ಭೋಗಿಸ್ಯಾನು.
೨೮೩೧ ಯೋಗಕ್ಷೇಮ ತಿಳಿಯದಿದ್ದರೂ ರೋಗದ ಚಿಕಿತ್ಸೆ ಬಲ್ಲ.
೨೮೩೨ ಯೋಗಿಯಾದರೂ ಭೋಗ ಬಿಡ. [ನೂ ವೊಂದೆ.
೨೮೩೩ ಯೋಗ್ಯತೆ ಅರಿಯದ ಧೊರೆತನವೂ ರೋಗವರಿಯದ ವೈದ್ಯ
೨೮೩೪ ಯೋಚಿಸಿದ ಹಾಗೆ ಸೂಚಿಸುವದು. [ಇಲ್ಲ.
೨೮೩೫ ಯೋಜನ ನಡಿಯಲಿಕ್ಕೆ ಕೂಡದಿದ್ದರೂ ಭೋಜನದಲ್ಲಿ ಕಡಿಮೆ
೨೮೩೬ ಯೌವನ ಕುಂದಿದರೂ ಗಂಹರ ಕುಂದಲಿಲ್ಲ.
೨೮೩೭ ರಂಗನ ಮುಂದೆ ಸಿಂಗನೇ. [ಲಿಕ್ಕೆ ತಿಳೇದೇ.
೨೮೩೮ ರಂಗೋಲೆ ಹಾಕಲಿಕ್ಕೆ ತಿಳಿಯದಿದ್ದರೂ ಹೊಂಗರಕನ ಕೆತ್ತೆ ತೆಗೀ
೨೮೩೯ ರಂಡೆಗೆ ಗಂಡನಿಲ್ಲ, ಭಂಡೆಗೆ ನೀತಿ ಇಲ್ಲ.
೨೮೪೦ ರಚನೆಯಲ್ಲಿ ಕಡಿಮೆಯಾದರೂ ವಚನದಲ್ಲಿ ಕಡಿಮೆ ಇಲ್ಲ.
೨೮೪೧ ರಜಪುತ್ರನಾದರೂ ಅಜನ ಬರಹ ಮೀರ್ಯಾನೇ.
೨೮೪೨ ರಟ್ಟೆ ಇದ್ದರೂ ಅಟ್ಟೆ ಉಣ್ಣ.

೨೮೪೩ ರತ್ನ ವೊಳ್ಳೇದಾದರೆ ಇದ್ದ ಠಾವಿನಲ್ಲೇ ಬೆಲೆಯಾಗುತ್ತದೆ.
೨೮೪೪ ರಕ್ಷಣೆ ಮಾಡಲಿಕ್ಕೆ ತಿಳಿಯದಿದ್ದರೂ ಭಕ್ಷಣೆ ಮಾಡಲಿಕ್ಕೆ ಬಲ್ಲ.
೨೮೪೫ ರಾಗ ಬರುವಾಗ ತಂತೀ ಹರೀತು.
೨೮೪೬ ರಾಗಿ ತಿಂದವ ರೋಗಿ, ಅಕ್ಕಿ ತಿಂದವ ಹಕ್ಕಿ.
೨೮೪೭ ರಾಜರ ಠೀವಿ, ತಿರುಕರ ಲಕ್ಷಣ.
೨೮೪೮ ರಾಜಕ ಬಂದರೂ ರಾಜ್ಯಕ್ಕೆ, ದೈವಿಕ ಬಂದರೂ ರಾಜ್ಯಕ್ಕೆ.
೨೮೪೯ ರಾಣಿಯಾದರೆ ಗೋಣಿ ಯೆತ್ತ ಬಾರದೇ.
೨೮೫೦ ರಾಮನಂಥಾ ರಾಜನಿಲ್ಲ, ಕಾಮನಂಥಾ ಪುರುಷನಿಲ್ಲ.
೨೮೫೧ ರಾಮಾನ್ಯವೂ ಸಾಮಾನ್ಯವಲ್ಲಣ್ಣಾ, ಆಳಿಗೆ ಆಳು ಭಾರ.
೨೮೫೨ ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡದು.
೨೮೫೩ ರಾಯರ ಪಾದದಾಣೆ ಹಾರೆ ನುಂಗು.
೨೮೫೪ ರಾಯರು ಸತ್ತ ಹಾವಳಿ.
೨೮೫೫ ರಾವಣನ ಹೊಟ್ಟೆಗೆ ಕಾಸಿನ ಮಜ್ಜಿಗೆ.
೨೮೫೬ ರಾಕ್ಷಸನಾದರೆ ಭಿಕ್ಷುಕನಿಗೆ ಯೇನು.
೨೮೫೭ ರೀತಿ ತಿಳಿಯದಿದ್ದರೂ ಮಾತು ಬಲ್ಲ.
೨೮೫೮ ರುಚಿ ಕಂಡ ನಾಯಿ ಸುಚಿಯಾದರೂ ಬಿಡದು.
೨೮೫೯ ರುಚಿ ಇಲ್ಲದಿದ್ದರೆ ಹಸಿ ಅಕ್ಕಿ ತಿಂದಾನೇ.
೨೮೬೦ ರುದ್ರನಾದರೇನು ಭದ್ರನಾದರೇನು ನಿದ್ರೆ ಬಂದರೆ ಸರಿ.
೨೮೬೧ ರುಪ್ಪಿ ಕೊಡದವ ರುಮಾಲು ಕೊಟ್ಟಾನೇ.
೨೮೬೨ ರೂಢಿ ಇಲ್ಲದ ಪದ ಹಾಡಿದರೆ ತಿಳಿದಾನೇ.
೨೮೬೩ ರೆಪ್ಪೆ ಹಂದಿದರೆ ಇಪ್ಪೆ ಹಾಕುವದು ಬಿಟ್ಟೀತೇ. [ತಿಕ್ಕೇದೇ.
೨೮೬೪ ರೇಕೇ ಮಾಡಲಿಕ್ಕೆ ತಿಳಿಯದಿದ್ದರೆ ಶೋಕೂರಿಗೆ ಹೋಗಲಿಕ್ಕೆ
೨೮೬೫ ರೇಣು ಮಾಣಿಕವಾದರೂ ವಾಣಿಜತನ ಬಿಟ್ಟಾನೇ.
೨೮೬೬ ರೊಕ್ಕಕ್ಕೆ ಕಡಿಮೆಯಾದರೆ ದುಃಖಕ್ಕೂ ಕಡಿಮೆಯೇ.

೨೮೬೭ ರೊಟ್ಟಿಗೆ ಬಂದ ನಾಯಿ ತುಪ್ಪಕ್ಕೆ ಬಂದೀತೇ.
೨೮೬೮ ರೊಟ್ಟಿ ತೊಳೆದು ನೀರು ಕುಡಿದ ಹಾಗೆ.
೨೮೬೯ ರೋಗವಾದರೇನು ಭೋಗವಾದರೇನು ಹೋಗಲಿಕ್ಕಾಗದೇ.
೨೮೭೦ ರೋಗಿ ಬಯಸಿದ್ದೇ ವೈದ್ಯ ತರಿಸಿದ.
೨೮೭೧ ರೋಮ ಇದ್ದರೇನು ಗೋಮ ತಿಳೇದೇ.
೨೮೭೨ ಲಂಕೆಗೆ ಹೋದರೂ ಕೊಂಕಣಕಿಣಿ ಬಿಡಲಿಲ್ಲ.
೨೮೭೩ ಲಂಚ ಕೊಟ್ಟರೂ ಸಂಚು ತಿಳಿಸಲಿಲ್ಲ.
೨೮೭೪ ಲಗ್ನಕಾಲಕ್ಕೆ ವಿಘ್ನ ಮಾಡ ಬಾರದು.
೨೮೭೫ ಲಯವಾದ ಮೇಲೆ ಭಯವೇನು.
೨೮೭೬ ಲಲಾಟದಲ್ಲಿ ಇಲ್ಲದ್ದು ಗಾಲಾಟ ಹಾಕಿದರೂ ಸಿಕ್ಕದು.
೨೮೭೭ ಲವಂಗ ಕೊಟ್ಟು ಲವಣ ಕೊಂಡ.
೨೮೭೮ ಲಕ್ಷಣಗೇಡಿ ಹೆತ್ತಳೇ ಲೆಖ್ಖವಿಲ್ಲದ ಮಕ್ಕಳ.
೨೮೭೯ ಲಕ್ಷಣವಂತಗೆ ಭಿಕ್ಷೆಯೇ ಸಿರಿ.
೨೮೮೦ ಲಕ್ಷವಾದರೂ ಭಿಕ್ಷೆ ಬೇಡ ಬಾರದು.
೨೮೮೧ ಲಕ್ಷೇಶ್ವರನೊಬ್ಬ, ಭಿಕ್ಷೇಶ್ವರನೊಬ್ಬ.
೨೮೮೨ ಲಾಭವಿಲ್ಲದೆ ಸೆಟ್ಟಿ ಹಳ್ಳಿಗೆ ಹೋಗ. [ಕಡಿಮೆ.
೨೮೮೩ ಲಾಲನೆ ಮಾಡಲಿಕ್ಕೆ ಕಡಿಮೆ ಇಲ್ಲದಿದ್ದರೂ ಪಾಲನೆಗೆ ಮಾತ್ರ
೨೮೮೪ ಲಾವಂಚವೂ ಹುಲ್ಲೇ ಲಕ್ಷ್ಮೇಶ್ವರನೂ ಮನುಷ್ಯನೇ ಆದರೆ ಭೇ
೨೮೮೫ ಲಿಂಗ ಹರಿದ ಮೇಲೆ ಜಂಗಮನ ಹಂಗೇನು. [ದವಿಲ್ಲವೋ.
೨೮೮೬ ಲಿಪಿ ಮಿಾರಲಿಕ್ಕೆ ಪಿಪೀಲಿಕೆಯಿಂದ ಕೂಡೀತೇ.
೨೮೮೭ ಲೀಲೆ ಕೇಳಿದಾಕ್ಷಣ ಮೇಲಕ್ಕೆ ಯೇರ್ರ್ಯಾನೇ.
೨೮೮೮ ಲೆಕ್ಕ ತಿಳಿಯದಿದ್ದರೆ ವೊಕ್ಕಲಿಗರೇನು ಮಾಡ್ಯಾರು.
೨೮೮೯ ಲೆಕ್ಕದಿಂದ ಹೊತ್ತದಕ್ಕೂ ಮುಪ್ಪಿನಿಂದ ಸತ್ತದಕ್ಕೂ ದುಃಖವೇನು.
೨೮೯೦ ಲೆತ್ತ ಹಾಕಲಿಕ್ಕೆ ಹೋದರೆ ಬೋಕಿ ಬಿತ್ತು.

೨೮೯೧ ಲೇವಡಿ ರುಚಿ ಹಾವಡಿಗ ಬಲ್ಲನೇ.

೨೮೯೨ ಲೇಸು ಆಗುವಾಗ್ಯೆ ಘಾಶಿಗೊಳ್ಳ ಬಾರದು.

೨೮೯೩ ಲೇಹ ಕುಡಿದರೆ ಲೇಸು ಆದೀತು.

೨೮೯೪ ಲೊಟ್ಟೆಯಲ್ಲಿ ಗಟ್ಟಿಗನಾದರೂ ಕೊಟ್ಟ ವಿನಹಾ ಬಿಡುವದಿಲ್ಲ.

೨೮೯೫ ಲೋಕದವರೆಲ್ಲಾ ಸತ್ತರೆ ಶೋಕ ಮಾಡುವವರ್‍ಯಾರು.

೨೮೯೬ ಲೋಕ ಹಾಳಾದರೆ ನಾಕ ಹಾಳಾದೀತೇ. [ರಕ್ಕೆ ಕಡಿಮೆ ಯೇನು.

೨೮೯೭ ಲೋಗರ ಮನೇಲಿ ಯೆಮ್ಮೇ ಇದ್ದರೆ ತನ್ನ ಮನೇಲಿ ಹಾಲೋಗ

೨೮೯೮ ಲೋಪವೇನೂ ಇಲ್ಲ, ದೀಪಕ್ಕೆ ಮಾತ್ರ ಬಗೆ ಇಲ್ಲ.

೨೮೯೯ ಲೋಭ ನಡಿಸಿ ನಡಿಸಿ ಭೋಗ ಕೆಡಿಸಿ ಕೊಂಡ.

೨೯೦೦ ಲೌಕಿಕ ನಡಿಸಿ ಲೋಕವೇ ಮರೆತ.

೨೯೦೧ ವಂಚಕನಿಗೆ ಸಂಚು ಕೊಟ್ಟ ಹಾಗೆ.

೨೯೦೨ ವಂಟಿಗನಾದರೂ ತಂಟೆ ಮಾಡೋದು ಬಿಡಲಿಲ್ಲ.

೨೯೦೩ ವಂಟಿ ಮಾರಿ ತಂಟೆ ತೀರಿಸಿದರೂ ದಂಟಿಕೋಲು ಬಿಡಲಿಲ್ಲ.

೨೯೦೪ ವಂಡಾರ ಕಂಬಳ ಬಸ್ರೂರ ಜಪ್ಪಳ ಕೋಟೀಶ್ವರ ಕೋಡೀ
ಹಬ್ಬ ಮೂರೂ ಕಂಡರೆ ಮೋಚ.

೨೯೦೫ ವಂದನೆ ಮಾಡಿದರೂ ಹಂದೀಕಾಟ ಹೋಗಲಿಲ್ಲ.

೨೯೦೬ ವಂಶಸ್ಥನಾದರೂ ವಂಶಾಂತಕನಾದ.

೨೯೦೭ ವಚನ ಕೇಳಿದರಿಂದ ಆಹಾರ ಪಚನವಾದೀತೇ.

೨೯೦೮ ವಟ್ಟೆ ಕೊಟ್ಟ ವಿನಹಾ ಸೆಟ್ಟೆ ಬಿಡ.

೨೯೦೯ ವಡಂಬಡಿಕೆಯಿಂದ ಆಗುವದು ದಡಂಬಡಿಕೆಯಿಂದ ಆದೀತೇ.

೨೯೧೦ ವಡಂಬಡಿಸಿದರೆ ವೊಡಲುರಿ ಹೋದೀತೇ.

೨೯೧೧ ವಡೆಯನ ಕಂಡ ಮೇಲೆ ವಡೆ ತಿನ್ನಲಿಕ್ಕೆ ದರಿದ್ರವೇ.

೨೯೧೨ ವಡೆಯ ಬಂದರೂ ವೊಡದ ಪಾತ್ರೆ ಕೂಡಲಿಲ್ಲ.

೨೯೧೩ ವಣಗಿದ ಯೆಲೆ ಉದುರುವಾಗ್ಯೆ ಹಶಿ ಯೆಲೆ ನಗಾಡುತ್ತದೆ.

೨೯೧೪ ವನಕೆ ಚಿಗುರಿದ ಹಾಗೆ.

೨೯೧೫ ವನವಾಸಕ್ಕೆ ಹೋದರೂ ಘನಕಷ್ಟ ಬಿಡಲಿಲ್ಲ.

೨೯೧೬ ವಮನ ಮಾಡಿ ಮಾಡಿ ಗಮನಕ್ಕೆ ಸಿದ್ಧನಾದ.

೨೯೧೭ ವಯಸ್ಸು ಕಡಿಮೆಯಾದರೂ ಆಯಾಸದಲ್ಲಿ ಕಡಿಮೆ ಇಲ್ಲ.

೨೯೧೮ ವರದಿ ಹೇಳುವವನಿಗಾದರೂ ಹರದನ ಹಂಗು ಬೇಕು.

೨೯೧೯ ವರಹೀನನಾದರೂ ಕುಲಹೀನನಾಗ ಬಾರದು.

೨೯೨೦ ವರಳಲ್ಲಿ ಹರಳು ಹುರಿದರೆ ಅರಳು ಆದೀತೇ.

೨೯೨೧ ವರಾತದವನಿಗೆ ಫರಾತವಾದರೂ ಮಾರಿ ಕೊಡ ಬೇಕು.

೨೯೨೨ ವರುಷ ಹೆಚ್ಚಾದರೆ ಪರಶೆ ಸಂಗಡ ಹೋಗಲಿಕ್ಕೇನು.

೨೯೨೩ ವರ್ಗದಲ್ಲಿ ತಪ್ಪಿದರೆ ಉಳಿಗದಲ್ಲಿ ತಪ್ಪೀತೇ.

೨೯೨೪ ವರ್ಣನೆ ಇಲ್ಲದ ಪದದಲ್ಲಿ ಬಣ್ಣನೆ ಇದ್ದೀತೇ.

೨೯೨೫ ವರ್ಣ ಹೆಚ್ಚಿದರೂ ಮರಣ ಪಡಿಯದೆ ಇರ.

೨೯೨೬ ವರ್ತಿ ಉರೀತೊ, ತೈಲ ಉರೀತೊ.

೨೯೨೭ ವರ್ಮ ಬಲ್ಲವ ಕರ್ಮಕ್ಕೆ ಅಂಜಾನೇ.

೨೯೨೮ ವಶವೊಪ್ಪಿಸಿದರೂ ದಶೆ ಬಿಡುವದಿಲ್ಲ.

೨೯೨೯ ವಸನವಿದ್ದವನಿಗಾದರೂ ಮಸಣ ತಪ್ಪದು.

೨೯೩೦ ವಸ್ತಿ ಇದ್ದಲ್ಲಿ ಖಸ್ತಿ ಮಾಡ ಬಾರದು.

೨೯೩೧ ವಸ್ತ್ರಹೀನನೋ ಕುಲಹೀನನೋ.

೨೯೩೨ ವಾಕ್ಚಾತುರ್ಯವಿದ್ದವನಾದರೆ ನಾಕ ಶೇರುವನೇ.

೨೯೩೩ ವಾಡಿಕೆ ಇದ್ದವನಾದರೆ ಹಾಡಿಕೆ ತಿಳಿಯುವದೇ

೨೯೩೪ ವಾಣಿ ಗಾಣಿ ಶೇಲಿ ಅಂದ ಹಾಗೆ.

೨೯೩೫ ವಾತರೋಗವಿದ್ದವನಾದರೆ ವಾದ್ಯ ಬಾರಿಸುವನೇ.

೨೯೩೬ ವಾದಾ ಮಾಡಿ ಮಾಡಿ ಹಾದರ ಕಲಿತು ಕೊಂಡ.

೨೯೩೭ ವಾದ್ಯದಲ್ಲಿ ಕಡಿಮೆಯಾದರೆ ನಾದದಲ್ಲಿಯೂ ಕಡಿಮೆಯೇ.

೨೮೩೮ ವಾರ ತೀರಿದರೂ ಹಾರುವ ಬರಲಿಲ್ಲ.

೨೮೩೯ ವಾರಿ ಇಲ್ಲದ ಸುಂಕ ದಾರಿಗೆ ದಾರಿಯೇ.

೨೮೪೦ ವಾಲೀ ಅಂಗಕ್ಕೆ ಕಲೆ ಇಲ್ಲ, ರಾಮನ ಬಾಣಕ್ಕೆ ಹುಸಿ ಇಲ್ಲ.

೨೮೪೧ ವಾಲೀ ಹಾಗೆ ಬಲವಂತನಿಲ್ಲ, ಹಾಲಿನಕ್ಕಿಂತ ಸವಿ ಇಲ್ಲ.

೨೮೪೨ ವಾಶಿ ಆಗದ ರೋಗಕ್ಕೆ ರಾಶಿಮದ್ದು ಮಾಡಿದರೂ ವ್ಯರ್ಥ.

೨೮೪೩ ವಾಶೀಲಿ ಸಿಕ್ಕಿದ ಜೀನಸು ಹಾಸಿಗೆಯಲ್ಲಿ ಆದರೂ ಕೊಂಡಾನು.

೨೮೪೪ ವಾಸ ತಪ್ಪಿದರೂ ಹಾಸಲಿಕ್ಕೆ ಸಿಕ್ಕಲಿಲ್ಲ.

೨೮೪೫ ವಿಖ್ಯಾತಿ ಪಟ್ಟರೂ ಅಪಖ್ಯಾತಿ ಹೋಗಲಿಲ್ಲ.

೨೮೪೬ ವಿಘ್ನವಾಯಿತು ಯೆಂದು ನಗ್ನವಾದರೆ ಆದೀತೇ.

೨೮೪೭ ವಿಚಾರದಲ್ಲಿ ಕಡಿಮೆಯಾದರೂ ಆಚಾರದಲ್ಲಿ ಕಡಿಮೆ ಇಲ್ಲ.

೨೮೪೮ ವಿಜಾಪುರದಲ್ಲಿ ವಿಜಾರದವರೆಷ್ಟು ಜನ ಅಂದ ಹಾಗೆ.

೨೮೪೯ ವಿಟನಾದವಗೆ ಮಠವಾದರೇನು.

೨೮೫೦ ವಿಠಲಭಟ್ಟನ ಪುರಾಣ ಬಿಟ್ಟಲ್ಲಿಯೇ ಮುಗೀತು.

೨೮೫೧ ವಿಡೂರ ಬಂದದ್ದು ಅಡೂರಿಗೆ ಹೋದರೆ ಬಿಟ್ಟೀತೇ.

೨೮೫೨ ವಿತ್ತವಿದ್ದವನಾದರೂ ಸತ್ತನಕ ಇರ.

೨೮೫೩ ವಿದ್ಯಕ್ಕಿಂತ ಬುದ್ಧಿ ಶ್ರೇಷ್ಟ, ಬುದ್ಧಿಗಿಂತ ಆಹಾರ ಶ್ರೇಷ್ಟ.

೨೮೫೪ ವಿದ್ಯವಿಲ್ಲದವ ಹದ್ದಿಗಿಂತ ಕಡೆ.

೨೮೫೫ ವಿದ್ಯಾ ಭಂಡಾರಿಸಿ ಬಿಟ್ಟು ದೊಡ್ಡೆಯಾಗಿ ಬಂಡಿಯ ಬೋವನಾದ.

೨೮೫೬ ವಿದ್ವಾಂಸನಾದರೂ ವಿಧ್ವಂಸನಾಗದೆ ಇರ.

೨೮೫೭ ವಿದ್ವಾಂಸರ ಮುಂದೆ ವಿದ್ವಾಂಸರು ಬರ ಬಹುದೇ ಗೋವಿಂದ.

೨೮೫೮ ವಿಧ ತಿಳಿದವನಾದರೂ ವಿಧಿ ಬಿಡದು.

೨೮೫೯ ವಿಧ ತಿಳಿಯದಿದ್ದರೆ ಮದ ಹೋದೀತೇ.

೨೮೬೦ ವಿನಿಯೋಗಕ್ಕೆ ಕಡಿಮೆಯಾದರೂ ಹನಿಯೋಗಕ್ಕೆ ಕಡಿಮೆ ಇಲ್ಲ.

೨೮೬೧ ವಿಪತ್ತು ಬಂದರೂ ಆಪತ್ತು ಬಿಡಲಿಲ್ಲ.

೨೮೬೨ ವಿಮಾನ ಯೇರ ಭೇಕಾದರೆ ಪರಮಾನ್ನ ತಿನ್ನ ಬೇಕೇ.

೨೮೬೩ ವಿಷ ತಿಂದರೆ ಬದುಕ ಬಹುದು, ವಿಷಮದಲ್ಲಿ ಬದುಕ ಕೂಡದು.

೨೮೬೪ ವಿಷದ ಅನ್ನ ಉಂಡಲ್ಲದೆ ವಿಷ ತಿಳಿಯದು.

೨೮೬೫ ವಿಷಯ ತಿಳಿಯದಿದ್ದರೆ ವಿಷಮ ತಿಳಿಯದೇ.

೨೮೬೬ ವಿಳುಪಾದರೂ ಬಿಳುಪೇ ಲೇಸು.

೨೮೬೭ ವೀಣೆ ಬಾರಿಸಲಿಕ್ಕೆ ತಿಳಿಯದಿದ್ದರೆ ಸಾಣೆ ತೀದಲಿಕ್ಕೆ ತಿಳಿಯದೇ.

೨೮೬೮ ವೀರನ ಶೌರ್ಯ ಹಾರುವನ ಮೇಲೆಯೇ.

೧೮೬೯ ವೀಸದ ಲೆಕ್ಕ ತಿಳಿಯದವ ಭಾಷೆಯ ಲೆಕ್ಕ ಮಾಡ್ಯಾನೇ.

೨೮೭೦ ಉಸುಳಿ ಉಸುಳಿ ರೋಗ, ಹೊಗಳಿ ಹೊಗಳಿ ರಾಗ.

೨೮೭೧ ವೃಕ್ಷ ದೊಡ್ಡದಾದರೂ ಪಕ್ಷಿ ಹೇಲದೆ ಬಿಡದು.

೨೮೭೨ ವೆಂಕಟರಮಣ ಯೆಂದರೂ ವೆಂಕಟಪ್ಪ ಬೆನ್ನು ಬಿಡ.

೨೮೭೩ ವೆಂಕು ಪಣಂಬೂರಿಗೆ ಹೋದ ಹಾಗೆ.

೨೮೭೪ ವೆಚ್ಚಕ್ಕೆ ಕಡಿಮೆಯಾದರೂ ಮತ್ಸರಕ್ಕೆ ಕಡಿಮೆ ಇಲ್ಲ.

೨೮೭೫ ವೇಗದವನಿಗೆ ರೋಗ ತಪ್ಪದು.

೨೮೭೬ ವೇದವೆಂಬುವದು ಗಾದೆಯೋ.

೨೮೭೭ ವೇದಾ ತಿಳಿದವನಾದರೂ ವೇದನೆ ಬಿಟ್ಟೀತೇ.

೨೮೭೮ ವೇದಾ ತಿಳಿಯದಿದ್ದರೆ ಹಾದಿ ತಿಳಿಯದೇ.

೨೮೭೯ ವೇದಾ ಪಠಿಸಿದವ ಭೇದಾ ಮಾಡ್ಯಾನೇ.

೨೮೮೦ ವೇಷಕ್ಕೆ ತಕ್ಕ ಹಾಸ್ಯ, ದೇಶಕ್ಕೆ ತಕ್ಕ ಭಾಷೆ.

೨೮೮೧ ವೇಳೆ ಕಳಿವೆನೆಂದರೆ ಕಾಳ ಕೇಳ್ಯಾನೇ.

೨೮೮೨ ವೈಕುಂಟಕ್ಕೆ ಹೋದರೂ ಕುಂಟಣಗಿತ್ತಿ ಉಪದ್ರ ತಪ್ಪಲಿಲ್ಲ.

೨೮೮೩ ವೈದ್ಯನಿಗೆ ಐಧಣ ಕೊಟ್ಟರೂ ಐದುವದು ತಪ್ಪಲಿಲ್ಲ.

೨೮೮೪ ವೈಧಿಕ ತಿಳಿಯದಿದ್ದರೂ ಬೈದಾಡಲಿಕ್ಕೆ ಬಲ್ಲ.

೨೮೮೫ ವೈಪು ಉಳ್ಳವ ಕೈಪು ಕಟ್ಟ್ಯಾನೇ.

೨೯೮೬ ವೈರವಿದ್ದವನಿಂದ ಕ್ಷೌರ ಮಾಡಿಸಿ ಕೊಂಡ ಹಾಗೆ.

೨೯೮೭ ವೈರಾಗ್ಯ ಉಳ್ಳವನಾದರೂ ವೈರತ್ವ ಬಿಡಲಿಲ್ಲ.

೨೯೮೮ ವೈಶಾಖಮಾಸ ಬಂದರೂ ವೈಶ್ಯರ ಉಪದ್ರ ಬಿಡಲಿಲ್ಲ.

೨೯೮೯ ವೈಷ್ಣವರ ಮಕ್ಕಳಿಗೆ ಅಂಗಾರವೇ ಭಂಗಾರ, ಸ್ಮಾರ್ತರ ಮಕ್ಕಳಿಗೆ ಗಂಧವೇ ಚಂದ.

೨೯೯೦ ವೊಡ್ಡಂತಿ ಮಾಡಿದರೆ ಹೆಡ್ಡತನ ಹೋದೀತೇ.

೨೯೯೧ ವ್ಯಭಿಚಾರ ಮಾಡಿದರೂ ಅಭಿಚಾರ ಬಿಡಲಿಲ್ಲ.

೨೯೯೨ ವ್ಯರ್ಥವಾದದ್ದಕ್ಕೆ ಸ್ವಾರ್ಥ ಪಟ್ಟಾರೇ.

೨೯೯೩ ವ್ಯವಹಾರಕ್ಕೂ ಆಹಾರಕ್ಕೂ ದಾಕ್ಷಿಣ್ಯ ಮಾಡ ಬಾರದು.

೨೯೯೪ ವ್ಯಸನವಿದ್ದವ ಹಸನು ಆಗನು.

೨೯೯೫ ವ್ಯಾಜ್ಯಾ ಮಾಡುವವ ಅಜ್ಜಗೆ ಬಿಟ್ಟಾನೇ.

೨೯೯೬ ಶಂಖ ಪಿಡಿದರೂ ಪುಂಕುತನ ಬಿಡಲಿಲ್ಲ.

೨೯೯೭ ಶಕುನ ಇಲ್ಲದಿದ್ದರೂ ಅವಶಕುನಕ್ಕೆ ಕಡಿಮೆ ಇಲ್ಲ.

೨೯೯೮ ಶಕುನದ ಹಕ್ಕಿಯ ಗೋಣು ಮುರಿದ ಹಾಗೆ.

೨೯೯೯ ಶಕುನವಾಗುತ್ತದೆ ಯೆಂದು ಬೆಳಗ ತನಕ ಕದ್ದರೆ ಆದೀತೇ.

೩೦೦೦ ಶಕ್ತಿ ಇದ್ದವನಾದರೂ ಯುಕ್ತಿ ಇದ್ದವನ ಕೆಳಗೆ.

೩೦೦೧ ಶಕ್ಯವಲ್ಲದ ಕಾರ್ಯ ಸಕ್ಕರೆಯಲ್ಲ.

೩೦೦೨ ಶಟವಿದ್ದವನಿಗೆ ಹಟವ್ಯಾಕೆ.

೩೦೦೩ ಶಣಸುವವನಾದರೆ ಹೆಣ ನೋಡಿ ಹೆದರ್‍ಯಾನೇ.

೩೦೦೪ ಶವೆ ಕೂಡಿಸಲಿಕ್ಕೆ ತಿಳಿಯದವ ಹದನಾದ ಕೆಲಸ ಮಾಡ್ಯಾನೇ.

೩೦೦೫ ಶನಿ ಕಾಡಿತೆಂದು ಹನಿಗೆ ನಿತ್ತರೆ ಬಿಟ್ಟೀತೇ.

೩೦೦೬ ಶನೀ ಕಾಟದಲ್ಲಿ ಸುಖ ಉಂಟೇ. [ಕಡಿಮೆ ಇಲ್ಲ.

೩೦೦೭ ಶಬ್ದದ ಅರ್ಥ ತಿಳಿಯದಿದ್ದರೂ ಹಬ್ಬದ ಹೋಳಿಗೆ ತಿನ್ನಲಿಕ್ಕೆ

೩೦೦೮ ಶರಣನ ಗುಣ ಮರಣದಲ್ಲಿ ನೋಡ ಬೇಕು.

೩೦೦೯ ಶರಣು ಬಿದ್ದವವನಿಗೆ ಮರಣ ಉಂಟೇ.

೩೦೧೦ ಶರೇಲಿ ಬಿದ್ದವನಿಗೆ ಮಳೆ ಯೇನು.

೩೦೧೧ ಶಸ್ತ್ರದ ಅಭ್ಯಾಸವಿಲ್ಲದಿದ್ದರೆ ವಸ್ತ್ರ ಕದಿಯಲಿಕ್ಕೆ ತಿಳಿಯದೋ.

೩೦೧೨ ಶಾಂತಿ ತಿಳಿಯದವನಾದರೆ ವಾಂತಿ ವಮನವಾಗಲಿಕ್ಕಿಲ್ಲವೇ.

೩೦೧೩ ಶಾಂತೀ ಮಾಡಿದರೂ ಭ್ರಾಂತಿ ಹೋಗಲಿಲ್ಲ.

೩೦೧೪ ಶಾಟಿ ಸುಟ್ಟರೆ ಇದ್ದಲೂ ಇಲ್ಲ ಬೂದಿಯೂ ಇಲ್ಲ.

೩೦೧೫ ಶಾನಭವನ ಗುಣ ಲೆಕ್ಕದಲ್ಲಿ ನೋಡು, ಮಾನವಂತನ ಗುಣ ನಡತೆಯಲ್ಲಿ ನೋಡು.

೩೦೧೬ ಶಾನಭೋಗನ ಸಂಬಳ ಸಂತೋ ಯೆಂದು ಕೇಳ ಬೇಡ, ಹೆಂಡತಿ ದೆಸೆಯುವರು ಉಂಡರೋ ಯೆಂದು ಕೇಳ ಬೇಡ.

೩೦೧೭ ಶಾಪಾ ಕೊಡುವವ ಪಾಪಕ್ಕೆ ಹೆದರ.

೩೦೧೮ ಶಾಯಿ ಇಲ್ಲದೆ ಕಾಗದ ನಾಯಿಗೂ ಬೇಡ.

೩೦೧೯ ಶಾಲು ಹೊದ್ದವನಾದರೂ ಹಾಲು ಬಿಟ್ಟಾನೆ.

೩೦೨೦ ಶಾಲೆ ತರಲಿಕ್ಕೆ ದರಿದ್ರವಾದರೆ ಮಾಲೆ ಹಾಕಲಿಕ್ಕೂ ದರಿದ್ರವೇ.

೩೦೨೧ ಶಾವಿಗೆ ಸಿಕ್ಕಿ ಸತ್ತವನಿಲ್ಲ, ಹಾವಿಗೆ ಸಿಕ್ಕಿ ಬದುಕಿದವನಿಲ್ಲ.

೩೦೨೨ ಶಾಸ್ತ್ರ ತಿಳಿಯದಿದ್ದರೆ ವಸ್ತ್ರ ಮೈಲೆಯಾಗಿರ ಬೇಕೇ.

೩೦೨೩ ಶಿಂಬಳ ತಿಂದರೆ ಸಂಬಳ ಕೊಟ್ಟಾರೇ.

೩೦೨೪ ಶಿಕ್ಕಿದರೆ ಉಚ್ಚೆ ಕುಡಿದೆನು, ಸೊಕ್ಕಿದರೆ ರಕ್ತ ಕುಡಿದೆನು.

೩೦೨೫ ಶಿಟ್ಟಿಗೆ ಕೊಯ್ದ ಮೂಗು ಶಾಂತತ್ವಕ್ಕೆ ಹತ್ತೀತೇ.

೩೦೨೬ ಶಿಟ್ಟು ಬಂದರೂ ಅಟ್ಟುವಿನಹಾ ಉಣ್ಣ ಕೂಡದು.

೩೦೨೭ ಶಿರಿಯೊಲಿದರೆ ಐಶ್ವರ್ಯ, ಹರಿಯೊಲಿದರೆ ವೈಕುಂಠ.

೩೦೨೮ ಶಿವ ಕೊಟ್ಟದ್ದು ಸಿದ್ಧಪ್ಪ ಕೊಟ್ಟಾನೇ.

೩೦೨೯ ಶಿವ ಪೂಜೆಯಲ್ಲಿ ಕರಡಿ ಬಂದ ಹಾಗೆ.

೩೦೩೦ ಶಿವಾ ಯೆಂದರೆ ಶಿರಗು ಸುತ್ತಿ ಕೊಂಡ, ಭವಾ ಯೆಂದರೆ ಭೈರವಾಸು ಹರದು ಬಿಟ್ಟ.

೩೦೩೧ ಶಿಶು ಹೋಗಿ ಕೆಸು ತಿಂತು ಯೆಂತ ಮುಖಕ್ಕೆ ಮಶಿಯೊರಸಿಕೊಂಡ.

೩೦೩೨ ಶಿಕ್ಷೆ ಇದ್ದರೆ ಭಕ್ಷ ಬೇಯುತ್ತದೆ ಅಂದ.

೩೦೩೩ ಶೀತ ಮೀರಿದವನಿಗೆ ವಾತದ ಭಯವೇನು.

೩೦೩೪ ಶೀತರೆ ಬೀಳುವ ಮೂಗು ಶಿವರಾತ್ರಿವರೆಗೆ ಇದ್ದೀತೇ.

೩೦೩೫ ಶೀನಿದರೆ ಶ್ವಾನಸಾದಾನೇ.

೩೦೩೬ ಶೀಮೆ ಸ್ವಲ್ಪವಾದರೂ ಕರಕರೆ ಹೆಚ್ಚು.

೩೦೩೭ ಶೀರೆಯಾದರೆ ಹಾರವಗಿತ್ತಿಗೆ ಆಗದೇ.

೩೦೩೮ ಶೀಲವಂತೆ ತಂದ ಅಗ್ಗಿಣಿ ಜಂಗಮಗೆ ಶಿವಾರ್ಚನೆಗಾಯ್ತು.

೩೦೩೯ ಶೀಲ ವೊಳ್ಳೇದಾದರೂ ಗುಣ ಕೆಟ್ಟದ್ದು.

೩೦೪೦ ಶೀಸದ ಉಳಿಯಲ್ಲಿ ಶೈಲ್ಯ ವೊಡಿಯ ಬಹುದೇ.

೩೦೪೧ ಶೀಳು ಆದರೂ ಆಳುವದು ಬಿಡ.

೩೦೪೨ ಶುಂಠನಿಗೆ ಯೆಂಟಷ್ಟು ಕಲಿಸಿದರೂ ವ್ಯರ್ಥ.

೩೦೪೩ ಶುಕ್ರ ವಕ್ರನಾದರೂ ತಕ್ರ ಬಿಡ.

೩೦೪೪ ಶುಕ್ಲಾಟಕ್ಕೆ ಶುಂಠೀ ತಿಂದು ಮುಕ್ಳಿ ಯೆಲ್ಲಾ ಉರಿ.

೩೦೪೫ ಶುಚಿಯಲ್ಲಿ ಕಡಿಮೆಯಾದರೂ ಮಶಿ ಹಚ್ಚಿ ಕೊಳ್ಳೋದರಲಿ ಕಡಿಮೆ ಇಲ್ಲ.

೩೦೪೬ ಶುದ್ಧಕ್ಕೆ ಹೋದರೆ ವೊದ್ದೆ ಉಡು ಬೇಕಾಗುತ್ತದೆ.

೩೦೪೭ ಶುಭಕಾರ್ಯಕ್ಕೆ ಹೋದರೂ ಅಶುಭವಾಗೋದು ನಿಲ್ಲಲಿಲ್ಲ.

೩೦೪೮ ಶುಭ ಮರೆ, ಅಶುಭ ತೊರೆ.

೩೦೪೯ ಶೂಲಕ್ಕೆ ತಿಕಾ ಆನಿಸಿಕೊಂಡು ಗೌಳೀ ಶಕುನ ಕೇಳಿದ.

೩೦೫೦ ಶೃಂಗಾರಕ್ಕೆ ಕಡಿಮೆಯಾದರೂ ಮಂಗಾಟಕ್ಕೆ ಕಡಿಮೆ ಇಲ್ಲ.

೩೦೫೧ ಶೆಕೆ ಹೆಚ್ಚಾಯಿತೆಂದು ಕಂಬಳಿ ಹೊದ್ದುಕೊಂಡ.

೩೦೫೨ ಶೆಟ್ಟಿ ಬಿಟ್ಟಲ್ಲೇ ಪಟ್ಟಣ.

೩೦೫೩ ಶೆಟ್ಟಿಯ ಬಾಳು ಸತ್ತಲ್ಲದೆ ತಿಳಿಯದು.

೩೦೫೪ ಶೆಟ್ಟಿ ಯೇನು ಮಾಡುತ್ತಾನೆ ಅಳಿತಾನೆ ಹೊಯ್ಯುತ್ತಾನೆ.

೩೦೫೫ ಶೆಟ್ಟಿ ಶೃಂಗಾರ ಆಗುವಾಗ್ಯೆ ಪಟ್ಣವೆಲ್ಲಾ ಸೂರೆ ಹೋಯಿತು.

೩೦೫೬ ಶೆಟ್ಟಿ ಸವಾಸೇರು, ಲಿಂಗ ಅಡೀ ಸೇರು.

೩೦೫೭ ಶೆಟ್ಟಿ ಹೆಡ್ಡ, ಕುಂಬಾರ ಜಾಣ.

೩೦೫೮ ಶೆಟ್ಟೀ ಸಂಗಾ ಮಾಡು, ಗಿಟ್ಟೀ ಸಂಗಾ ಮಾಡ ಬೇಡ.

೩೦೫೯ ಶೆರೆ ವರಹ ಕೊಟ್ಟರೂ ಶೀರೇ ವ್ಯಾಪಾರ ಬೇಡ.

೩೦೬೦ ಶೆರೇಮನೆಯಲ್ಲಿ ಬುತ್ತಿ ಬಿಚ್ಚಿದ ಹಾಗೆ.

೩೦೬೧ ಶೇದಿದ ನೀರು ಹಾದೀಲಿ ಹಾಕ್ಯಾರೇ.

೩೦೬೨ ಶೇರದ ಗಂಡನಿಗೆ ಮೊಸರಲ್ಲಿ ಕಲ್ಲು.

೩೦೬೩ ಶೇರು ಕಡಿಮೆಯಾದರೂ ಮಾರಾಟದಲ್ಲಿ ಕಡಿಮೆ ಇಲ್ಲ.

೩೦೬೪ ಶೋಧಕನಾದರೆ ಬಾಧಕವಿಲ್ಲ.

೩೦೬೫ ಶ್ರದ್ಧೆಯುಳ್ಳವ ಹಾಡಿದ್ದೆ ಗದ್ಯ.

೩೦೬೬ ಶ್ರವಣದಿಂದ ಮನನ, ಮರಣದಿಂದ ಮುಕ್ತಿ.

೩೦೬೭ ಶ್ರಾದ್ಧದ ಊಟಕ್ಕೆ ಕರದು ಶ್ರಮ ಪಡಿಸಿದ ಹಾಗೆ.

೩೦೬೮ ಶ್ರೀ ಪೋಣಗಿದೆ, ಗ ಬಚ್ಚಿದೆ.

೩೦೬೯ ಸಂಕಟಕ್ಕೆ ನಾರಾಯಣಾ ಅಂದರೂ ವೆಂಕಟಪ್ಪ ಬೆನ್ನು ಬಿಡ.

೩೦೭೦ ಸಂಕಟ ಬಂದರೆ ವೆಂಕಟರಮಣ.

೩೦೭೧ ಸಂಕೆ ತಿಳಿಯದವನಿಗೆ ಅಂಕೆ ಮಾಡ ಬೇಡ.

೩೦೭೨ ಸಂಗತಿ ಗುಣ ಸೋತು ನೋಡು, ಹೆಂಡತಿ ಗುಣ ಹೇತು ನೋಡು.

೩೦೭೩ ಸಂಗೀತ ತಿಳಿಯದಿದ್ದರೂ ಅಂಗಿ ಹಾಕಿ ಕೊಳ್ಳಲಿಕ್ಕೆ ಬಲ್ಲ.

೩೦೭೪ ಸಂಚಿ ದೊಡ್ಡದಾದರೆ ಮಂಚ ಹಿಡಿದೀತೇ.

೩೦೭೫ ಸಂಚು ನಡಿಸಲಿಕ್ಕೆ ಸಂಚುಗಾರ ಕೊಡ ಬೇಕೇ.

೩೦೭೬ ಸಂಜೀವನ ಆಗ ಬೇಕಾದರೆ ಮುಂಜಿನ ನೀರು ಬೇಕೇ.

೩೦೭೭ ಸಂಡಿಗೆ ಹುರಿಯ ಬೇಕಾದರೆ ಮುಂಚೆ ಕೆಳಗೆ ಮಾಡ ಬೇಕೇ.

೩೦೭೮ ಸಂತಾನವಿಲ್ಲದವ ಮಂತಾನಸ್ಥನಾದಾನೇ.

೩೦೭೯ ಸಂತೆಗೆ ಚೀಟು, ಮುಂಗೈಗೆ ಬಳೆ.

೩೦೮೦ ಸಂತೆ ನೆರೆಯುವದಕ್ಕಿಂತ ಮುಂಚೆ ಗಂಟು ಕಳ್ಳರ ಹಾವಳಿ.

೩೦೮೧ ಸಂತೆ ಹೊತ್ತಿಗೆ ಮೂರು ಮೊಳ ನೇದ ಹಾಗೆ.

೩೦೮೨ ಸಂತೆ ಹೋದರೂ ಭ್ರಾಂತಿ ಹೋಗಲಿಲ್ಲ.

೩೦೮೩ ಸಂತೇ ಸೂಳೆಯ ನೆಚ್ಚಿ ಮನೇ ಹೆಂಡತಿಯ ಬಿಟ್ಟ.

೩೦೮೪ ಸಂಧಿ ಮುಗಿದರೂ ಮಂದಿ ಹೋಗಲಿಲ್ಲ.

೩೦೮೫ ಸಂಬಳಕ್ಕಾದರೆ ಮುಂದೆ ಚಾಕ್ರಿಗಾದರೆ ಹಿಂದೆ.

೩೦೮೬ ಸಂಭ್ರಮದ ಸಮ್ಮಾನಕ್ಕೆ ವೊಮ್ಮಾನಕ್ಕಿ ಸಜ್ಜಿಗೆ.

೩೦೮೭ ಸಂಸಾರ ಗುಟ್ಟು, ರೋಗ ರಟ್ಟು.

೩೦೮೮ ಸಂಸಾರ ಬೆಳೀತು ಯೆಂತ ಮಾಂಸಾರ ಮಾಡ ಬಹುದೇ.

೩೦೮೯ ಸಂಸ್ಕೃತ ತಿಳಿಯದಿದ್ದರೆ ಮೆಣಸಿನ ಖಾರ ತಿಳಿಯದೇ.

೩೦೯೦ ಸಂಸ್ಥಾನಕ್ಕೆ ಹೋದರೂ ಮನಸ್ತಾಪ ಹೋಗದು.

೩೦೯೧ ಸಂಹಾರ ಮಾಡುವವ ಕಮ್ಮಾರನಿಗೆ ಬಿಟ್ಟಾನೇ.

೩೦೯೨ ಸಕ್ಕರೆ ಕಹಿಯಾಗದು, ನೆಕ್ಕರೆ ಐಶ್ವರ್ಯ ಬಾರದು.

೩೦೯೩ ಸಕ್ತಿ ಮಾಡಿದರೆ ಮುಕ್ತಿ ದೊರಕುವದೇ.

೩೦೯೪ ಸಗಣಿ ತಿನ್ನುವವ ತುಪ್ಪದ ರುಚಿ ಬಲ್ಲನೇ.

೩೦೯೫ ಸಗಣಿ ತಿನ್ನುವವನಿಗೆ ಮೀಸೆ ಹಿಡಿಯುವವನೊಬ್ಬ.

೩೦೯೬ ಸಜ್ಜನನಿಗೂ ಸಜ್ಜನನಿಗೂ ಮೂರು ದಾರಿ, ದುರ್ಜನನಿಗೂ ದುರ್ಜನನಿಗೂ ವೊಂದೇ ದಾರಿ, ಸಜ್ಜನನಿಗೂ ದುರ್ಜನನಿಗೂ ಯೆರಡು ದಾರಿ.

೩೦೯೭ ಸಟೆ ನುಡಿಯುವವನಿಗೆ ಮಠದ ಪೂಜೆ ಯಾಕೆ.

೩೦೯೮ ಸಡಿಲು ಬಿಟ್ಟವನಿಗೆ ಬುದ್ಧಿ ಮಹಲಕ್ಷ್ಮಿ ಹಾಕಿದರೂ ಬಾರದು.

೩೦೯೯ ಸದ್ದಕನಿಗಿಂತ ನಂಟನಿಲ್ಲ, ಲದ್ದಿಗೆಕ್ಕಿಂತ ಖಜ್ಜಾಯವಿಲ್ಲ.

೩೧೦೦ ಸಣ್ಣ ತಲೆಗೆ ದೊಡ್ಡ ಮುಂಡಾಸು.
೩೧೦೧ ಸಣ್ಣವನಿಂದ ಮಣ್ಣಿನ ಕೆಲಸವು ಆಗದು.
೩೧೦೨ ಸತ್ತ ಕುರಿ ಕಿಚ್ಚಿಗೆ ಅಂಜೀತೇ.
೩೧೦೩ ಸತ್ತ ಮಗುವಿನ ಕಣ್ಣು ತಾವರೆ.
೩೧೦೪ ಸತ್ತ ಮಗುವಿನ ಚಂದ್ರ ತಾರಾಬಲ ಕೇಳಿದ ಹಾಗೆ.
೩೧೦೫ ಸತ್ತ ಮುಕ್ಕಿ ಯೆತ್ತ ಬಿದ್ದರೇನು.
೩೧೦೬ ಸತ್ತ ಯೆಮ್ಮೆಗೆ ಹಾಲು ಹೆಚ್ಚು.
೩೧೦೭ ಸತ್ತವನ ಕಾಲು ತಟ್ಟಿದ ಹಾಗೆ.
೩೧೦೮ ಸತ್ತವರ ಮಕ್ಕಳು ಇದ್ದವರ ಕೈಯಲ್ಲಿ.
೩೧೦೯ ಸತ್ತವರ ಮನೇಲಿ ಕೆಟ್ಟವರ್‍ಯಾರೆಂದರೆ ಸತ್ತವನೇ ಕೆಟ್ಟನು.
೩೧೧೦ ಸತ್ತವರಿಗತ್ತರೆ ಅತ್ತವರು ಸಾಯರೇ.
೩೧೧೧ ಸತ್ತ ಸುದ್ದಿಯನ್ನಾದರೂ ಸಂತೋಷದಿಂದ ಹೇಳು.
೩೧೧೨ ಸತ್ತಿಗೆ ಅರ್ಧ ಭೋಯಿಗೆ, ಅತ್ತಿಗೆ ಅರ್ಧ ಭಾವಗೆ.
೩೧೧೩ ಸತ್ಯವಿದ್ದರೆ ಯೆತ್ತಲೂ ಭಯವಿಲ್ಲ.
೩೧೧೪ ಸದರು ಇಲ್ಲದಿದ್ದರೆ ವೊದರುವದಕ್ಕೂ ತಿಳೀದೋ. [ನಿಲ್ಲುತ್ತದೆ.
೩೧೧೫ ಸದ್ದು ಕೇಳಿದರೆ ಗೌಜಿ ನಿಲ್ಲುತ್ತದೆ, ಮದ್ದು ಕುಡಿದರೆ ರೋಗ
೩೧೧೬ ಸನ್ನೆ ತಿಳಿಯದಿದ್ದರೆ ಮನ್ನಣೆಯೂ ತಿಳಿಯದೇ. [ಳೆಯುತ್ತದೆ.
೩೧೧೭ ಸನ್ಯಾಸಿಗೆ ಕಚ್ಚಿದ ನಾಯಿ ಪಾಪಕ್ಕೆ ಹೋಗೋ ವರೆಗೆ ಕಾಲು ಕೊ
೩೧೧೮ ಸನ್ಯಾಸಿ ಹೆಂಡತಿ ಮುಂಡೆಯೂ ಅಲ್ಲ, ಮುತ್ತೈದೆಯೂ ಅಲ್ಲ.
೩೧೧೯ ಸಪ್ಪುಗೆ ಇರು ಯೆಂದರೆ ಅಪ್ಪುಪ್ಪು ಯೆಂತ ಕೂಗಿದ.
೩೧೨೦ ಸಭೆ ಕೂಡಿದಾಕ್ಷಣ ಪ್ರಭೆ ಕೊಟ್ಟಾರೋ.
೩೧೨೧ ಸಮಯಕ್ಕಾಗದ ಅರ್ಥ ಸಹಸ್ರವಿದ್ದರೂ ವ್ಯರ್ಥ.
೩೧೨೨ ಸಮಯಕ್ಕಾದವನೇ ನಂಟ, ಕೆಲಸಕ್ಕೆ ವೊದಗಿದವನೇ ಬಂಟ.
೩೧೨೩ ಸಮಾಧಿಯಲ್ಲಿಯೂ ಸೊಳ್ಳೆ ಕಾಟ.

೩೧೨೪ ಸಮುದ್ರದ ನೆಂಟು; ಉಪ್ಪಿಗೆ ಮಾತ್ರ ಬಡತನ.
೩೧೨೫ ಸಮುದ್ರದಲ್ಲಿ ಕೊಳ್ಳಿ ಇಟ್ಟ ಹಾಗೆ.
೩೧೨೬ ಸಮುದ್ರ ದೊಡ್ಡದಾದರೂ ಪಾತ್ರೆ ಇದ್ದಷ್ಟೇ ನೀರು ಸಿಕ್ಕೀತು.
೩೧೨೭ ಸಮುದ್ರ ಮೇರೆ ತಪ್ಪಿದರೆ ಯಾರು ಮಾಡೋದೇನು.
೩೧೨೮ ಸರಕು ವೊಪ್ಪಿಸಿದ ಮೇಲೆ ಸುಂಕವೇ.
೩೧೨೯ ಸರಸ ಇದ್ದವನ ಮನೆಗೆ ಬರಿ ಸುಳ್ಳು ಹೋದರೆ ಹೊರಸಿ ಕೊಟ್ಟ ನಂತೆ ವೊಂದು ಮೊರ ಸುಳ್ಳು.
೩೧೩೦ ಸರಸವಾದದ್ದೆಲ್ಲಾ ವಿರಸಕ್ಕೆ ಹೇತು.
೩೧೩೧ ಸರಸವಾದರೆ ವಿರಸವಾದೀತು.
೩೧೩೨ ಸರಳು ಹೋದಾಕ್ಷಣ ದುರುಳತನ ಬಿಟ್ಟಾನೇ.
೩೧೩೩ ಸರಿಮನೆ ಯಾಕೆ ಸರಿಗೆ ಹಾಕಿ ಕೊಂಡರೆ ನೆರಮನೆ ಯಾಕೆ ಉರುಳು ಹಾಕಿ ಕೊಂಡಳು.
೩೧೩೪ ಸರ್ಪನ ಕೂಡೆ ಸರಸವೇ.
೩೧೩೫ ಸಲಹಲಿಕ್ಕೆ ತಿಳಿಯದಿದ್ದರೆ ಕೊಲ್ಲಲಿಕ್ಕೆ ತಿಳಿಯದೇ.
೩೧೩೬ ಸಲಿಗೇನಾಯಿ ಮೊಲಕ್ಕೆ ಮುತ್ತು ಕೊಟ್ಟ ಹಾಗೆ.
೩೧೩೭ ಸಲ್ಲದ ಠಾವಿನಲ್ಲಿ ಸಲಿಗೇ ಮಾಡಿದರೆ ಅಲ್ಲೇ ಹೋಯಿತು ಅಭಿಮಾನ.
೩೧೩೮ ಸಲ್ಲದ ನಾಣ್ಯ ಸಲ್ಲಿಕೆ ಮಾಡಿದರೆ ಅಲ್ಲಿಗೆ ಹೋಯಿತು.
೩೧೩೯ ಸಲ್ಲದ ಹೊನ್ನಿಗೆ ವಟ್ಟವಿಲ್ಲಿ.
೩೧೪೦ ಸವತಿಗೆ ಮುಂಡೆ ಆಗು ಅಂದ ಹಾಗೆ.
೩೧೪೧ ಸವತಿ ಸಣ್ಣಾವಳಲ್ಲ, ದಾಯಾದಿ ಚಿಕ್ಕವನಲ್ಲ.
೩೧೪೨ ಸವತೇಕಾಯಿ ಕಹಿಯಾದರೆ ಸವತಿ ಯೇನು ಮಾಡುವಳು.
೩೧೪೩ ಸಾಕಿದ ಮಗ ನಾಕ ಶೇರಿಸ್ಯಾನೇ.
೩೧೪೪ ಸಾಗು ಬಿದ್ದ ಹೊಲ ಹಾಗಕ್ಯಾ ಬೇಡ.
೩೧೪೫ ಸಾಣೆಗೆ ಕಾಲು ಮುಟ್ಟಿಸು ಅಂದರೆ ಆಚೇ ವರ್ಷದ ಹಾಗೆ ನಾಣ್ಯ ಕೊಡ ಬೇಕು ಅಂದ ಹಾಗೆ.

೩೧೪೬ ಸಾಸ್ಮೇ ಕಲ್ಲಿಗೂ ಬೋಳು ತಲೆಗೂ ಗಂಟು. [ನೋಡು.
೩೧೪೭ ಸಾಸ್ಮೇ ಗುಣ ಗಂಧದಲ್ಲಿ ನೋಡು, ಸಾಣ್ಯಾದ ಗುಣ ಬಣ್ಣದಲ್ಲಿ
೩೧೪೮ ಸಾದ ಯೆತ್ತಿಗೆ ಯೆರಡು ಹೇರು.
೩೧೪೯ ಸಾಧಿಸಿದರೆ ಸಬಳ ನುಂಗ ಬಹುದು.
೩೧೫೦ ಸಾಧ್ಯವಲ್ಲದ ಕೆಲಸ ಮಧ್ಯಾನ್ನದ ಮೇಲೆ ಆದೀತೇ.
೩೧೫೧ ಸಾಮಾನ ಇದ್ದವಗೆ ಗುಮಾನ ಯೇನು. [ವಾಗ.
೩೧೫೨ ಸಾಯುವ ತನಕ ಸಾಮು ಕಲಿತರೆ ಯುದ್ಧ ಮಾಡುವದು ಯಾ
೩೧೫೩ ಸಾಯುವನ ಕಣ್ಣಿಗೆ ಸುಳಿದವನೇ ಜವರಾಯ.
೩೧೫೪ ಸಾಯುವವರಿಗೆ ದೇವರಿಲ್ಲ, ಕೆಟ್ಟವರಿಗೆ ನೆಂಟರಿಲ್ಲ.
೩೧೫೫ ಸಾಯುವೆನೆಂದರೆ ಹೆಂಡತಿ ಬೈದಾಳು ಅಂದ ಹಾಗೆ.
೩೧೫೬ ಸಾರ ಬಲ್ಲವ ಸರ್ವಜ್ಞ.
೩೧೫೭ ಸಾರಿ ಕೊಂದರೆ ಪಾಪವಿಲ್ಲ.
೩೧೫೮ ಸಾರು ಚನ್ನಾಗಿದೆ ನೀರು ಮಾತ್ರ ಹೆಚ್ಚು ಆಯಿತು. [ಯಿತು.
೩೧೫೯ ಸಾಲಗಾರನ ಮನೆಗೆ ಸವದೆ ಹೊತ್ತರೆ ಮೇಲಣ ಬಡ್ಡಿಗೆ ಸಮವಾ
೩೧೬೦ ಸಾಲದವನ ಮುಂದೆ ಇರು, ಅರಮನೆಯ ಹಿಂದೆ ಇರು.
೩೧೬೧ ಸಾಲ ಸಲ್ಲದಿದ್ದರೆ ಹಾಲು ಕಹಿಯಾದೀತೇ.
೩೧೬೨ ಸಾಲಾ ಮಾಡಿದವ ತೀರಿಸಿ ಸಾಯಲಿಲ್ಲ, ಮೂಲಾ ಮಾಡಿದವ ಉಂಡು ಸಾಯಲಿಲ್ಲ. [ವರಾದರೂ ಮೇಲು ಅಂಬಾರೇ.
೩೧೬೩ ಸಾಲೆ ಇಲ್ಲದ ಊರು ಮಾಲೆ ಇಲ್ಲದ ಪ್ರಸ್ತ ಗೋಲಿಯಾಡುವ
೩೧೬೪ ಸಾವಕಾರರಾದರೇನು ಸಾವು ತಪ್ಪಿಸ್ಯಾರೋ.
೩೧೬೫ ಸಾವಿಗಂಜದವನು ನೋವಿಗೆ ಹೆದರ್ಯಾನೇ.
೩೧೬೬ ಸಾವಿರ ಕುದುರೆಗೆ ಸರದಾರನಾದರೂ ಮನೆ ಹೆಂಡತಿ ಕಾಸ್ತಾರ.
೩೧೬೭ ಸಾವಿರ ಕೊಟ್ಟು ಸಂತಾನ ಪಡೀ ಬೇಕು.
೩೧೬೮ ಸಾವಿರ ತನಕ ಸಾಲ, ಆಮೇಲೆ ಶೋಲ.

೩೧೬೯ ಸಾವಿರ ತೂಕ ಚಿನ್ನಕ್ಕೆ ಹಾಗ ತೂಕ ಮುಚ್ಚು.

೩೧೭೦ ಸಾವಿರ ಬೆಕ್ಕು ಕೂಡಿದರೆ ವೊಂದು ಹುಲಿಯಾದೀತೇ.

೩೧೭೧ ಸಾವಿರ ಭಾರಿ ಗೋವಿಂದ ಯೆನ್ನ ಬಹುದು ವೊಬ್ಬ ದಾಸಯ್ಯಗೆ ಭಿಕ್ಷೆ ನೀಡೋದು ಕಷ್ಟ.

೩೧೭೨ ಸಾವಿರ ಸುಳ್ಳು ಹೇಳಿ ವೊಂದು ಮದಿವೆ ಮಾಡು.

೩೧೭೩ ಸಾವಿರ ಹಾರಿ ಹೋಯಿತು, ನೂರು ಬೆರಸಿ ಬಂತು.

೩೧೭೪ ಸಾಷ್ಟಾಂಗ ಮಾಡಿದರೂ ಅಟ್ಟುಂಬೋದು ಹೋಗಲಿಲ್ಲ.

೩೧೭೫ ಸಾಸಿವೇಕಾಳು ಬೆಕ್ಕಿಗೆ ಪರ್ವತ.

೩೧೭೬ ಸಾಕ್ಷಿ ಹೇಳಿದರೆ ಮೋಕ್ಷ ಸಿಕ್ಕೀತೇ.

೩೧೭೭ ಸಿಂಪಿದ ಹನಿಗೆ ಸಂಪಿಗೆ ಅರಳೀತೇ.

೩೧೭೮ ಸಿಂಪು ಇದ್ದರೆ ಕಾಯಿ, ಮುಪ್ಪು ಆದರೆ ಮರಣ.

೩೧೭೯ ಸಿಂಹವಾದದ್ದು ಸಂಹರಿಸಲಾರದೋ.

೩೧೮೦ ಸಿಕ್ಕದ ಮೇಲಿಟ್ಟದ್ದು ಮಕ್ಕಳಿಗಾಗದೋ.

೩೧೮೧ ಸಿಡಿ ಸುರಿದ ಮೇಲೆ ಮಡಿ ಯೇನು.

೩೧೮೨ ಸಿದ್ಧರಸ ದೊರಕಿದರೂ ಮಧ್ಯಾನ್ನ ದರಿದ್ರ ಹೋಗಲಿಲ್ಲ.

೩೧೮೩ ಸಿಬ್ಬು ಇದ್ದವ ತುರಿಸಿ ಕೊಂಡರೆ ಅದು ವೊಂದು ಹಬ್ಬವೇ.

೩೧೮೪ ಸಿರಿ ಇದ್ದವಗೆ ನರೆ ಬಂದರೆ ಹರನಾದಾನೇ.

೩೧೮೫ ಸಿಸ್ತು ಇಲ್ಲದ ಭೂಮಿಗೆ ಶಾಮಿಲಾತು ಕೂಡೀತೋ.

೩೧೮೬ ಸೀನಿದರೆ ಹೇನು ಹೋದೀತೇ.

೩೧೮೭ ಸೀರೆ ಇಲ್ಲವೆಂದು ಹಾರೆ ಉಟ್ಟು ಕೊಂಡ ಹಾಗೆ.

೩೧೮೮ ಸೀಸವನ್ನು ಇಲಿ ತಿಂದರೆ ತಿದ್ದಣ್ಣನ ಹದ್ದು ಕೊಂಡು ಹೋಯಿತು.

೩೧೮೯ ಸುಂಕದವನ ಕೂಡೆ ಸುಖದುಃಖವೇ. [ಅಂದನಂತೆ.

೩೧೯೦ ಸುಂಕದವನ ಕೂಡೆ ಸುಖದುಃಖ ಹೇಳಿದರೆ ಕಂಕುಳಲ್ಲಿ ಯೇನು

೩೧೯೧ ಸುಂಕದವನು ಗೋದಾನ ಮಾಡಿದ ಹಾಗೆ.

೩೧೯೨ ಸುಂಕದವ ಸುಳ್ಳ, ಬಣಜಿಗ ಕಳ್ಳ.
೩೧೯೩ ಸುಕೃತಕ್ಕೆ ಕಡಿಮೆಯಾದರೆ ದುಷ್ಕೃತಕ್ಕೆ ಕಡಿಮೆ ಇಲ್ಲ.
೩೧೯೪ ಸುಖದುಃಖ ತಿಳಿಯದ ಮನುಷ್ಯ ನಖಕ್ಕಿಂತ ಕಡೆ.
೩೧೯೫ ಸುಗ್ಗಿ ಕಾಲದಲ್ಲಿ ನುಗ್ಗೆ ತಿಂದರೆ ಕಾತಿಕೆ ಕಾಲದಲ್ಲಿ ಜಗಲಿ ತಿಂದಾನೇ.
೩೧೯೬ ಸುಗ್ಗಿ ಮೇಲೆ ಕೊಳಕೆ, ಮಗ್ಗಿ ಮೇಲೆ ಲೆಕ್ಕ.
೩೧೯೭ ಸುಡುಗಾಡಿಗೆ ಹೋದ ಹೆಣ ತಿರುಗಿ ಬಂದೀತೇ.
೩೧೯೮ ಸುಣ್ಣವಿಲ್ಲದ ವಿಳ್ಯದ ಹಾಗೆ.
೩೧೯೯ ಸುಣ್ಣವಿಲ್ಲವೆಂದು ಬೆಣ್ಣೆ ತಿಂದೆ.
೩೨೦೦ ಸುಣ್ಣ ಹಚ್ಚಿ ಕೊಂಡರೆ ತಣ್ಣಗಾದೀತೇ.
೩೨೦೧ ಸುತ ನಿಲ್ಲದವಳ ಬಾಗ್ಯ, ಮತವಿಲ್ಲದವನ ಘನತೆ.
೩೨೦೨ ಸುತ್ತಿಗೆ ಇಲ್ಲದ ಹರದ, ಅತ್ತಿಗೆ ಇಲ್ಲದ ಮೈದುನ.
೩೨೦೩ ಸುದ್ದಿಯಲ್ಲಿ ಅದ್ದಿ ಹೋದರೂ ಮದ್ದು ಮಾಡದೆ ರೋಗ ಹೋಗದು.
೩೨೦೪ ಸುಭಾಷಿತವಿಲ್ಲದವ ಸಭಾನಾಯಿಕನಾದರೇನು.
೩೨೦೫ ಸುಮ್ಮಗಿದ್ದರೆ ವೊಡಂಬಟ್ಟ.
೩೨೦೬ ಸುರಂಗಾ ಕೊರದರೆ ಅವರಂಗಾಬಾದಿಗೆ ಹೋಗ ಬಹುದೇ.
೩೨೦೭ ಸುರೇ ಕುಡಿಯುವವನಿಗೆ ಮರೆ ಅಂಬೋದೇನು.
೩೨೦೮ ಸುಲಿಸಿ ಕೊಳ್ಳ ಬಹುದು, ಸುದ್ದಿ ಹೇಳ ಕೂಡದು.
೩೨೦೯ ಸುವ್ವಿ ಅಂದರೆ ತಿಳಿಯದೇ ವನಕೇ ರಾಗ.
೩೨೧೦ ಸುಳುವು ಹೇಳದವ ಸುದ್ದಿ ಹೇಳ್ಯಾನೇ.
೩೨೧೧ ಸುಳ್ಳನ ಮನೇಲಿ ಉಂಡಲ್ಲದೆ ಬದ್ಧವಲ್ಲ.
೩೨೧೨ ಸುಳ್ಳ ದೇವರಿಗೆ ಕಳ್ಳ ಪೂಜಾರಿ.
೩೨೧೩ ಸೂಜಿಗೆ ಸೂಜಿ ಮುತ್ತು ಕೊಟ್ಟ ಹಾಗೆ.
೩೨೧೪ ಸೂಜಿ ಚೆನ್ನವಾದರೆ ದಾಗದ ಕಾಸು.

೩೨೧೫ ಸೂಜೀ ಅಷ್ಟು ಬಾಯಿ, ಗುಡಾಣದಷ್ಟು ಹೊಟ್ಟೆ.
೩೨೧೬ ಸೂಜೀ ಬೆಳಕಿಗೆ ಚಂದಾವರಕ್ಕೆ ಹೋದ ಹಾಗೆ.
೩೨೧೭ ಸೂರೆ ಹೋದರೂ ಮಾರಿ ಬಿಡಲಿಲ್ಲ.
೩೨೧೮ ಸೂರ್ಯನ ಮೇಲೆ ಸುರೇ ಚಲ್ಲಿದರೆ ಮೋರೇ ಮೇಲೆ ಬೀಳುವದು.
೩೨೧೯ ಸೂಲು ತಪ್ಪಿದರೆ ಗೊಡ್ಡೆ.
೩೨೨೦ ಸೂಳೆಗೆ ಕೊಟ್ಟ ಹಣ, ಸುಡುಗಾಡಿಗೆ ಹೋದ ಹೆಣ.
೩೨೨೧ ಸೂಳೆ ತಿರಿಗಿ ಕೆಟ್ಟಳು, ಸುಂಕದವ ತಿರುಗದೆ ಕೆಟ್ಟನು.
೩೨೨೨ ಸೂಳೆ ಬಂದರೆ ಅಮ್ಮಾ ಅಂದಂತೆ.
೩೨೨೩ ಸೂಳೆ ಮುಪ್ಪಾಗಿ ಕೊರವಿತ್ತಿಯಾದಳು.
೩೨೨೪ ಸೂಳೆ ಯೂರಿಗೆ ಹೆಂಡತಿ, ಧೊರೆ ಯೂರಿಗೆ ಅಪ್ಪ.
೩೨೨೫ ಸೂಳೆ ಕೈಯಿಂದ ಜೋಳಾ ಕುಟ್ಟಿಸಿದ ಹಾಗೆ.
೩೨೨೬ ಸೆಳೆಗೆ ಹೆದರದ ಮಗು ಬಳೆಗೆ ಹೆದರೀತೇ.
೩೨೨೭ ಸೇಕರಾವುತ ಯೆಲ್ಲಿ, ಗೋಕುಲಾಷ್ಟಮಿ ಯೆಲ್ಲಿ.
೩೨೨೮ ಸೇರು ರಾಜ, ಮಣ ಬಂಟ.
೩೨೨೯ ಸೇರು ಹೊರದ ತ್ರಾಸು ಭಾರ ಹೊತ್ತೀತೇ.
೩೨೩೦ ಸೇವಕನಿಗೆ ಲಾವಕತನವಿರ ಬಾರದು.
೩೨೩೧ ಸೇವೆಗಿಲ್ಲದ ಬಂಟ, ಭಾವಕ್ಕಿಲ್ಲದ ಭಕ್ತಿ. [ರಾಗವಿಲ್ಲ.
೩೨೩೨ ಸೊಂಟ ಮುರಿದ ಮೇಲೆ ನೆಂಟನಿಲ್ಲ, ಗಂಟ್ಲು ಮುರಿದ ಮೇಲೆ
೩೨೩೩ ಸೊಲಗೆ ಅಳೀಲಿಕ್ಕೆ ತಿಳಿಯದವ ಖಂಡಿ ಅಳಿಯುವನೇ.
೩೨೩೪ ಸೊಲ್ಲು ಸೊಲ್ಲಿಗೆ ನಲ್ಲನಾದರೆ ಸಾಯೋ ಪರಿಯಂತರ ಯೆಷ್ಟು
೩೨೩೫ ಸೊಸೆಗೆ ಗೃಹ ಪ್ರವೇಶ, ಅತ್ತೆಗೆ ಪರವಾಸ. [ನಲ್ಲರು.
೩೨೩೬ ಸೊಸೆಗೆ ಬಿಸಿ ಇಲ್ಲ, ಹಂದಲಿಗೆ ಹಶಿ ಇಲ್ಲ.
೩೨೩೭ ಸೊಸೆಗೆ ಬುದ್ಧಿ ಹೇಳಿ ಅತ್ತೆ ಅಗಸನ ಹತ್ರ ಹೋದಂತೆ.
೩೨೩೮ ಸೊಸೆ ಬಂದರೇನು ಅತ್ತೆ ಬಂದರೇನು ಬಿಸಿ ನೀರಿಗೆ ಮಾತ್ರ ದರಿದ್ರ.

೩೨೩೯ ಸೊಸೆ ಹೆತ್ತರೆ ಅತ್ತೆ ಖಾರಾ ಕುಡಿದ ಹಾಗೆ.

೩೨೪೦ ಸೋಕಿದ ನಾಯಿ ವೊಡೆಯನ ಗುರುತ ಬಲ್ಲಿತೆ.

೩೨೪೧ ಸೋದರತ್ತೆಗೆ ಮಿಾಶೆ ಬಂದರೆ ಚಿಕ್ಕಪ್ಪ ಅನ್ನಿಸಿ ಕೊಂಡಾಳ್ಯೇ.

೩೨೪೨ ಸೋನೇ ಮಳೆ ಹಾರೇಲಿ ಹಿಡಿದರೆ ಪಾನಿಗೆ ಪಾನಿಯೇ.

೩೨೪೩ ಸೋಭಾನೆ ತಿಳಿಯದವಳು ಶೋಭನ ಮಾಡಳ್ಯೋ.

೩೨೪೪ ಸೋರುವ ಮನೆಯನ್ನೂ ಹೋರುವ ಹೆಂಡತಿಯನ್ನೂ ದೂರ ಬಿಡ ಬೇಕು.

೩೨೪೫ ಸೋರುವ ಮನೆಯೂ ಲೊಟಕುವ ಗಂಡನೂ ಸರಿ.

೩೨೪೬ ಸೋರುವ ಮನೇಲಿ ಉಚ್ಚೆ ಹೊಯ್ದರೆ ಹಳ್ಳದ ಕೂಡೇ ಹಳ್ಳ.

೩೨೪೭ ಸೋರೆಕಾಯಿ ಆದರೆ ಹಾರೋರಿಗೆ ಆಗದೇ.

೩೨೪೮ ಸೋಲದೆ ಗೆಲವು ಆಗದು, ನೂಲದೆ ಬಟ್ಟೆಯಾಗದು.

೩೨೪೯ ಸೋವು ತಿಳಿದ ಮಾವ ನೂಲು ಬಿಟ್ಟಾನೇ.

೩೨೫೦ ಸೋಳೆಯ ಮಡಕೇಲಿ ಈಟೀಟು ಕೈ ಹೋಪಾಗ ಹುಟ್ಟಿದ ಮಗ.

೩೨೫೧ ಸಾಟು ಕೈಯಲ್ಲಿ ಇದ್ದಾಗ ಅವುಟು ಮಾಡಿದ್ದೇ ಬಂತು.

೩೨೫೨ ಸಾದೇ ತಾರದೆ ಇದ್ದರೆ ಸವತಿ ಯೇನು ಮಾಡ್ಯಾಳು.

೩೨೫೩ ಸಾದೇ ಹೊರೆ ಹೊತ್ತು ಕೊಂಡು ಹಾದೇಲಿ ಕೂತ ಹಾಗೆ.

೩೨೫೪ ಸ್ತುತಿ ತಿಳಿಯದವನಿಗೆ ಗತಿ ಯೇನು.

೩೨೫೫ ಸ್ತ್ರೀಯ ಭಾಗ್ಯ ಪುರುಷನ ಲಕ್ಷಣ.

೩೨೫೬ ಸ್ಥಳವಿಲ್ಲದವನಿಗೆ ನೆಳಲೇ ಆಸ್ಪದ.

೩೨೫೭ ಸ್ಥಾನವಿಲ್ಲದವನಿಗೆ ಮಾನವೆಲ್ಲಿ.

೩೨೫೮ ಸ್ಥಿತಿ ಇಲ್ಲದಿದ್ದರೂ ಗತಿ ಗೆಡ ಬಾರದು.

೩೨೫೯ ಸ್ನಾನ ತಪ್ಪಿದರೆ ಹೋಮದ ದಕ್ಷಿಣೆ ತಪ್ಪೀತೇ.

೩೨೬೦ ಸ್ನೇಹವೆಂಬುವದು ದೋಣಿ ಬಂಡಿ ಹಾಗಿರ ಬೇಕು.

೩೨೬೧ ಸ್ಮರಣೆ ತಪ್ಪಿದರೂ ಸ್ಥೈರಣೆ ಇರ ಬೇಕು.

೩೭೬೨ ಸ್ಮಾರ್ತರಿಗೆ ಸ್ವಾರ್ಥ ಹೆಚ್ಚು ವೈಷ್ಣವರಿಗೆ ಉಷ್ಣ ಹೆಚ್ಚು.
೩೭೬೩ ಸ್ವಧರ್ಮ ತಪ್ಪಿದರೂ ಅಧರ್ಮ ಮಾಡ ಬಾರದು.
೩೭೬೪ ಸ್ವಪ್ನದಲ್ಲಿ ದಂಡಿಗೇ ಯೇರಿ ಗೊಂಡೆ ಹಿಡದ ಹಾಗೆ.
೩೭೬೫ ಸ್ವಭಾವ ತಿಳಿದರೆ ನಿಭಾಯಿಸ ಬಹುದು.
೩೭೬೬ ಸ್ವರಗಾರ ಹಾಡಿದ್ದೇ ರಾಗ, ವೈದ್ಯಗಾರ ಹೇಳಿದ್ದೇ ರೋಗ.
೩೭೬೭ ಸ್ವರ ತಿಳೇದಿದ್ದರೆ ಹರದೋಟಿಗೆ ಮಾಡ ಬಾರದೇ.
೩೭೬೮ ಸ್ವರೂಪ ತಿಳಿದರೂ ಸ್ವಭಾವ ತಿಳಿಯಲಿಲ್ಲ.
೩೭೬೯ ಸ್ವರ್ಗದ ಬಾಗಲಿಗೆ ನರಕದ ನಾಯಿ.
೩೭೭೦ ಸ್ವರ್ಗವೂ ತಪ್ಪಿತು ದುರ್ಗವೂ ತಪ್ಪಿತು.
೩೭೭೧ ಸ್ವರ್ಗವೆಂಬುವದು ದುರ್ಗದ ಬಾಗಲೋ.
೩೭೭೨ ಸ್ವರ್ಣ ತಿಂದರೆ ಮರಣ ತಪ್ಪೀತೇ.
೩೭೭೩ ಸ್ವರ್ಣದ ಪರೀಕ್ಷೆ ತಿಳಿಯಗಿದ್ದರೆ ವರ್ಣದ ಪರೀಕ್ಷೆ ತಿಳೇದೇ.
೩೭೭೪ ಸ್ವಲ್ಪದ ಅರಸನಿಗೆ ಅಲ್ಪದ ಪ್ರಧಾನಿ.
೩೭೭೫ ಸ್ವಸ್ತವಿದ್ದವನ ಹಸ್ತ ನೋಡ ಬೇಕೇ.
೩೭೭೬ ಸ್ವಾನನ ಮುಂದೆ ಗಾನ ಹಾಡಿದ ಹಾಗೆ.
೩೭೭೭ ಸ್ವಾಮಿದ್ರೋಹಿ ಮನೆಗೆ ಪಂಚಮಹಾಪಾತಕದ ಬಾಗಲು.
೩೭೭೮ ಸ್ವಾರ್ಥವಿದ್ದವನ ಅರ್ಥ ವ್ಯರ್ಥವೇ ಸರಿ.
೩೭೭೯ ಹಂಕಾರಕ್ಕೆ ಉದಾಶಿನವೇ ಮದ್ದು.
೩೭೮೦ ಹಂಗಾಳಾದ ಮೇಲೆ ಮಂಗನ ಹಾಗೆ ಮಾಡ ಬೇಕು.
೩೭೮೧ ಹಂಗಿಸಿದರೂ ಮಂಗತನ ಹೋಗಲಿಲ್ಲ.
೩೭೮೨ ಹಂಗು ಹರಿದ ಮೇಲೆ ಶೊಂಗೇನು, ತೊಡರೇನು.
೩೭೮೩ ಹಂಚಿನಲ್ಲಿ ಉಣುವವನಿಗೆ ಹರಿವಾಣವ್ಯಾಕೆ. [ಇಲ್ಲ.
೩೭೮೪ ಹಂಡೆ ತುಂಬ ನೀರು ಮಿಂದರೂ ಮಂಡೇ ಕೂದಲು ಬೆಳೆಲೇ
೩೭೮೫ ಹಂಡೆ ತುಂಬಿದ ಮುಂಡೆ ಉಣ್ಣಾದೆ ಬಿಡಳು.

೩೨೮೬ ಹಂಡೇ ನೀರು, ಮುಂಡೇ ಅಡಿಗೆ.
೩೨೮೭ ಹಂಡೇ ಮಾರ ಬೇಡ, ಮುಂಡೆಗೆ ಹಾರ ಬೇಡ.
೩೨೮೮ ಹಂತಿ ತಪ್ಪಿದರೆ ಊಟ ತಪ್ಪೀತೇ.
೩೨೮೯ ಹಂದಿಗೆ ತೊಳ್ದರೆ ಕೆಸರು ಬಿಡದು.
೩೨೯೦ ಹಂದಿಯವರು ಹಾದರ ಮಾಡಿದರೆ ತುಮಟೆ ಯವರು ದಂಡಾತೆತ್ತರು.
೩೨೯೧ ಹಂದಿ ಹದಿನೈದು ಈದರೂ ವೊಂದೂ ಹಯವಾಗಲಿಲ್ಲ.
೩೨೯೨ ಹಂದೀ ಕೂಡಾಡಿ ಕಂದ ಹೇಲು ತಿಂದನು.
೩೨೯೩ ಹಂದೀ ಮೇಲೆ ಕೂತವ ಹೇಸಿಗೆಗೆ ಅಂಜಾನೇ.
೩೨೯೪ ಹಂಪೆಗೆ ಹೋಗದಿದ್ದರೆ ಸಂಪಿಗೆ ನೋಡಲಿಲ್ಲವೇ.
೩೨೯೫ ಹಂಬಲ ಬಿಟ್ಟರೂ ಮಮತೆ ಬಿಡೋದಿಲ್ಲ.
೩೨೯೬ ಹಂಸನಂಥಾ ಪಕ್ಷಿ ಇಲ್ಲ, ಕಂಸನಂಥಾ ರಾಕ್ಷಸನಿಲ್ಲ.
೩೨೯೭ ಹಂಸೇ ಹಾಗೆ ನಡೀಲಿಕ್ಕೆ ಹೋಗಿ ಗುಬ್ಬಿ ಕುಪ್ಪಳಿಸಿ ಬಿದ್ದ ಹಾಗೆ.
೩೨೯೮ ಹಕ್ಕಲು ಇಲ್ಲದ ವೊಕ್ಕಲು ಅಲ್ಲ, ಮಕ್ಕಳಿಲ್ಲದ ಭಾಗ್ಯವಲ್ಲ.
೩೨೯೯ ಹಗಲವಾಡಿ ಸಂಸ್ಥಾನದ ಹಾಗೆ. [ತೆಗದಳಂತೆ.
೩೩೦೦ ಹಗಲೆಲ್ಲಾ ಹಾದರವಾಡಿ ಇರುಳು ಗಂಡನ ತಲೆಯ ಹೇನು
೩೩೦೧ ಹಗೆಯದೊಳಗೆ ಬಿದ್ದ ನಾಯಿ ಹಾಕುವವರನ್ನರಿಯದು, ತೆಗಿಯು ವವರನ್ನರಿಯದು.
೩೩೦೨ ಹಗೆಯವನ ಚಂದ್ರ ತಾರಾಬಲ ಕೇಳಿದರೆ ಮಧ್ಯಾನ್ಹಕ್ಕೆ ಮರಣ.
೩೩೦೩ ಹಗೆಯವರ ಮಕ್ಕಳನ್ನೆವದಲ್ಲಿ ಕೊಂದ ಹಾಗೆ.
೩೩೦೪ ಹಗ್ಗ ಸುಟ್ಟರೆ ಹುರಿ ಹೋದೀತೇ.
೩೩೦೫ ಹಚ್ಚಡ ಹೊದಿಸಿದರೆ ಹುಚ್ಚು ಹೋದೀತೇ.
೩೩೦೬ ಹಚ್ಚಲಿಕ್ಕೆ ತಿಳಿಯದಿದ್ದರೆ ಮುಂಗೈ ಕಚ್ಚಿಕೊಂಡ ಹಾಗೆ.
೩೩೦೭ ಹಟ ಮಾಡಿ ಮಾಡಿ ಮಠ ಮಾರಿಸಿ ಕೊಂಡ.
೩೩೦೮ ಹಟ್ಟಿಗೆ ಗತಿ ಇಲ್ಲದವ ಮಠ ಕಟ್ಟ್ಯಾನೇ.

೩೩೦೯ ಹಟ್ಟೇಮಿ ಹುಟ್ಟಿದ್ದಲ್ಲ, ಕ್ರಯಕ್ಕೆ ಕೊಂಡದ್ದಲ್ಲ.

೩೩೧೦ ಹಡಗದ ಮೇಲೆ ತೆಗೆದ ಉಪವಾಸ ಯೇಕಾದಶಿಗೆ ಸಂದಾಯ.

೩೩೧೧ ಹಡಗ ಮುರಿದು ಹೋಯಿತು, ಮಡದಿ ಬಿಟ್ಟು ಹೋದಳು.

೩೩೧೨ ಹಡಗ ಹಡಪಲ್ಲ, ಮಡದಿ ರಾಣಿಯಲ್ಲ.

೩೩೧೩ ಹಣ ಉಳ್ಳವನ ಹೆಂಡತಿ ಆದರೂ ಋಣವಿದ್ದಷ್ಟೇ ಸಿಕ್ಕೇತು.

೩೩೧೪ ಹಣದಿಂದ ಋಣ ಆಗುವದು, ಗುಣದಿಂದ ಮೋಕ್ಷ ಆಗುವದು.

೩೩೧೫ ಹಣವಿದ್ದವನಿಗೆ ಗುಣವಿಲ್ಲ, ಗುಣವಿದ್ದವನಿಗೆ ಹಣವಿಲ್ಲ.

೩೩೧೬ ಹಣವಿಲ್ಲದವನು ಹೆಣಕ್ಕಿಂತ ಕಡೆ.

೩೩೧೭ ಹಣವೆಂದರೆ ಹೆಣ ಬಾಯಿ ಬಿಡುತ್ತದೆ.

೩೩೧೮ ಹಣೇಮಿಲ್ಲದ್ದು ಹಣಕಿದರೆ ಸಿಕ್ಕೇತೇ.

೩೩೧೯ ಹಣೇಲುಂಡೆ ಹರಿವೇಲುಂಡೆ ನಿನ್ನಲ್ಲುಂಡೆ ತಿರುಕ ಸಾತೆ.

೩೩೨೦ ಹಣ್ಣು ಜಾರಿ ಹಾಲಲ್ಲಿ ಬಿದ್ದ ಹಾಗೆ.

೩೩೨೧ ಹಣ್ಣೊಂದು ಶಲಭ ದೀಪದ ಮೇಲೆ ಬಿದ್ದು ಸತ್ತ ಹಾಗೆ.

೩೩೨೨ ಹಣ್ಣೆಸೊಪ್ಪು ಬೇಯುವಷ್ಟರಲ್ಲಿ ಹದಿನೆಂಟು ಮನಸು.

೩೩೨೩ ಹತ್ತರ ಕೂಡೆ ಹನ್ನೊಂದು, ಪರಶೇ ಕೂಡೆ ಗೋವಿಂದ.

೩೩೨೪ ಹತ್ತರ ಸಾವು ಮದುವೆ ಸಮಾನ.

೩೩೨೫ ಹತ್ತರ ಹಲ್ಲಕಡ್ಡಿ ಪೊಬ್ಬನ ತಲೇ ಹೊರೆ.

೩೩೨೬ ಹತ್ತರಿದ್ದರೆ ಹೆಂಡತಿ ವಳತಿದ್ದರೆ ಅಕ್ಕ, ವಳತು ಕೆಟ್ಟರೆ ಗೆಣೆಯ.

೩೩೨೭ ಹತ್ತಿ ತೂಗುವಲ್ಲಿ ನೊಣಕ್ಕೆ ಉಪವಾಸ.

೩೩೨೮ ಹತ್ತಿ ನೂಲು ಬೇಕು, ಮುತ್ತೈದೆ ಹಾಡ ಬೇಕು.

೩೩೨೯ ಹತ್ತು ಜನ ಯೆಂಬುವದು ಮುತ್ತಿನ ಸಮಾನ.

೩೩೩೦ ಹತ್ತು ದುಡೋದು ನಿನ್ನಿಂದ, ಮತ್ತೆ ಕೂಡೋದು ನನ್ನಿಂದ.

೩೩೩೧ ಹತ್ತು ಹಣ ಹೋದರೂ ಮೃದಂಗಶಬ್ದ ನಿವರ್ತಿಯಾಯಿತು.

೩೩೩೨ ಹದನವಿಲ್ಲದ ಕದನ ಮದನಗೂ ಅಸಾಧ್ಯ.

೩೩೩೩ ಹದ್ದು ಹಾರಲಿಕ್ಕೂ ಕೋವಿ ಹೂಡಲಿಕ್ಕೂ ಜೋಡು.

೩೩೩೪ ಹನಿ ಕೂಡಿದರೆ ಹಳ್ಳ, ತೆನೆ ಕೂಡಿದರೆ ಭತ್ತ. [ಸಿದನಂತೆ.

೩೩೩೫ ಹನುಮಂತರಾಯ ಹಗ್ಗ ತಿಂದರೆ ಪೂಜಾರಯ್ಯ ಶಾವಿಗೆ ಬಯ

೩೩೩೬ ಹನುಮನ ಮುಂದೆ ಹಾರೋ ಗುಬ್ಬಿಯೇ.

೩೩೩೭ ಹನ್ನೆರಡು ವರ್ಷ ರಾಮಾಯಣ ಕೇಳಿ ರಾಮ ರಾಕ್ಷಸನೋ ರಾವಣ ರಾಕ್ಷಸನೋ ಯೆಂದು ಕೇಳಿದ ಹಾಗೆ.

೩೩೩೮ ಹನ್ನೆರಡು ವರ್ಷ ಸಾಧಕಾ ಮಾಡಿ ಮನೆಯ ಮುದುಕೀ ಸೊಂಟ ಮುರಿದ ಹಾಗೆ.

೩೩೩೯ ಹನ್ನೊಂದು ವೋದಿದ ಮೇಲೆ ಇನ್ನೊಂದು ಕೇಳ ಬೇಡ.

೩೩೪೦ ಹಪ್ಪಳಾ ತಿಂಬುವವನಾದರೆ ಸಪ್ಪಳಾ ನುಂಗ್ಯಾನೇ.

೩೩೪೧ ಹಪ್ಪಳಾ ಮುರಿಯೋಕೆ ದೊಗ್ಗಾಲು ಹಾಕ ಬೇಕೇ.

೩೩೪೨ ಹಬೆಗೆ ತಾಳದೆ ಉರಿಯೊಳಗೆ ಬಿದ್ದನಂತೆ.

೩೩೪೩ ಹಬ್ಬ ಊಟ, ಜಾತ್ರೆ ನೋಟ.

೩೩೪೪ ಹಬ್ಬ ತಪ್ಪಿದರೆ ಹೋಳಿಗೆ ತಪ್ಪೀತೇ.

೩೩೪೫ ಹಬ್ಬದಲ್ಲಿ ಹಳೇ ಗಂಡನೇ.

೩೩೪೬ ಹಬ್ಬದೂಟ, ಹರಿವಾಣದ ವೀಳ್ಯ.

೩೩೪೭ ಹಮ್ಮು ಮುರಿದ ಮೇಲೆ ಗುಮ್ಮನಾದ.

೩೩೪೮ ಹರಕೆ ಕೊಟ್ಟರೂ ಹರಿಯೋದು ನಿಲ್ಲಲಿಲ್ಲ.

೩೩೪೯ ಹರಣ ಉಳಿಯೋದಾದರೆ ಮರಣಕ್ಕೆ ಅಂಜೆನು.

೩೩೫೦ ಹರ ತಿಂಬುವವನ ಬಳಿಗೆ ತಿರುದುಂಬುವವ ಹೋದ ಹಾಗೆ.

೩೩೫೧ ಹರದನ ಕುದುರೆಗೆ ಹರಕು ಜೀನು.

೩೩೫೨ ಹರದರ ಪರಾತ ಯೆಂದು ಹರವಿಯಲ್ಲಿ ತಲೇ ಅಡಗಿಸಿದ ಹಾಗೆ.

೩೩೫೩ ಹರವಿಯನ್ನದಲ್ಲಿ ವೊಂದಗಳು ನೋಡಿದರೆ ಸರಿ.

೩೩೫೪ ಹರಸೋದು ತಪ್ಪೋದಿಲ್ಲ, ತಿರಿದುಂಬುವದು ಹೋಗೋದಿಲ್ಲ.

೩೩೫೫ ಹರಿಯೋ ಪರಿಯಂತರ ಯೆಳೆಯ ಬಾರದು, ಮುರಿಯೋ ಪರಿ
೩೩೫೬ ಹರೆಯಕ್ಕೆ ಹಂದಿ ಹಣವಷ್ಟ. [ಯಂತರ ಬೊಗ್ಗಿಸ ಬಾರದು.
೩೩೫೭ ಹಲವರ ಸಂಗ ಕಲಹಕ್ಕೆ ಕಾರಣ.
೩೩೫೮ ಹಲವು ಸಮಗಾರರು ಕೂಡಿ ತೊಗಲೆಲ್ಲ ಹದಕೆಡಿಸಿದರು.
೩೩೫೯ ಹಲಸು ತಿಂದರೆ ಹೊಲಸು ಹೋದೀತೇ.
೩೩೬೦ ಹಲ್ಲಿ ಪ್ಪೋದೋದೇನು, ಬೆವರು ಸೋರೋದೇನು.
೩೩೬೧ ಹಲ್ಲು ಇರುವಾಗಲೇ ಕಡ್ಲೆ ತಿನ್ನ ಬೇಕು.
೩೩೬೨ ಹಲ್ಲು ಕಚ್ಚಿ ಕೊಂಡು ಅವಲಕ್ಷಣ ಅನ್ನಿಸಿ ಕೊಂಡ.
೩೩೬೩ ಹಲ್ಲುಗಳ ನಡುವೆ ನಾಲಿಗೆ ಸಿಕ್ಕಿರುವ ಹಾಗೆ.
೩೩೬೪ ಹಲ್ಲುಬ್ಬಿ ನಕ್ಕರೂ ಕಾಣ ಬಾರದು, ಅತ್ತರೂ ಕಾಣ ಬಾರದು.
೩೩೬೫ ಹಲ್ಲು ಹೋದ ಮೇಲೆ ಕಲ್ಲು ಜಗದೇನು ಅಂದ ಹಾಗೆ.
೩೩೬೬ ಹವುದೆಂದರೆ ಬ್ಯೆಯುತ್ತಾನೆ, ಅಲ್ಲೆಂದರೆ ಹೊಡೀತಾನೆ.
೩೩೬೭ ಹಶಿ ಕಲ್ಲು ಘಾಳಿಗೆ ಹಾರಿದ ಹಾಗೆ.
೩೩೬೮ ಹಶಿ ಗೋಡೆಗೆ ಕಲ್ಲು ಹೊಡದ ಹಾಗೆ.
೩೩೬೯ ಹಶಿ ಬಿಸಿ ತಿನ್ನಲಿಕ್ಕೆ ಮನಸೇ ಪ್ರಧಾನ.
೩೩೭೦ ಹಸುರು ಹುಲ್ಲು ತಿನ್ನುವವಗೆ ಮೊಸರನ್ನ ಆಗದೇ.
೩೩೭೧ ಹಸ್ತದ ಗುಣ ಸ್ವಸ್ಥವಾದ ಮೇಲೆ ನೋಡ ಬೇಕು.
೩೩೭೨ ಹಸ್ತಾಂತ್ರ ಬಾಕಿ ಆದರೆ ಪುಸ್ತಕ ಯೇನು ಮಾಡೀತು.
೩೩೭೩ ಹಳದು ಮಿಾರಿ ಹೊಸದಿಲ್ಲ, ಬಿಳಿದು ಮಿಾರಿ ಬಣ್ಣವಿಲ್ಲ.
೩೩೭೪ ಹಳ್ಳಿ ಹಾಳಾದರೇನು, ಥಿಲ್ಲಿ ಪುಸ್ನಾದರೇನು.
೩೩೭೫ ಹಳ್ಳೀ ಕುರುಬರಿಗೆ ಗಾಜೇ ಮಾಣಿಕ್ಯ.
೩೩೭೬ ಹಳ್ಳೀ ದೇವರಿಗೆ ಕೊಳ್ಳೀ ದೀಪ.
೩೩೭೭ ಹಾಂಗೆ ಕುಣಿಯುವ ಐದ್ದಿ ಹವೆಯಕ್ಕೆ ಬಾರದೆ ಬಿಟ್ಟಾಳೇ.
೩೩೭೮ ಹಾಕುವದಕ್ಕೆ ತೆಗಿಯುವದಕ್ಕೆ ಗೌಡನ ಕೋಳವೇ.

೩೩೭೯ ಹಾಗದ ಕೋೞಿ ಮುಪ್ಪಾಗದ ಬೆಲ್ಲ ತಿಂತು.
೩೩೮೦ ಹಾಗದ ಕೋಳಿ ಮುಪ್ಪಾಗದ ಮೇವು ತಿಂತು.
೩೩೮೧ ಹಾಗದ ಗೋಧಿ ಮುಪ್ಪಾಗದ ಬೆಲ್ಲ ತಿಂತು.
೩೩೮೨ ಹಾಗಲವಾಡಿಗೆ ಹೋದರೆ ೧೦ದರೆ ಹಾಗಕ್ಕೊಂದೆಮ್ಮೆ ತಂದರೆ
೧ಂದರೆ ನಿಮ್ಮವರಿಗೆ ಮಜ್ಜಿಗೆ ಕೊಟ್ಟೆಯಾ.
೩೩೮೩ ಹಾಡಲಿಕ್ಕೆ ತಿಳೇದಿದ್ದರೆ ವೋಡಲಿಕ್ಕೂ ತಿಳೇದೇ.
೩೩೮೪ ಹಾಡಿದ್ದೇ ಹಾಡೋಕಿಸ ಬಾಯಿದಾಸ. [ಹೋಗು.
೩೩೮೫ ಹಾಡುವ ವರೆಗೂ ಹಾಡು, ಕಡೇಲಿ ಕದಾ ಮುಚ್ಚಿ ಕೊಂಡು
೩೩೮೬ ಹಾದರಕ್ಕೆ ಹುಟ್ಟಿದ ಮಗ ಹೊಯ್ಲಿಗೆ ಬಿದ್ದು ಸತ್ತ.
೩೩೮೭ ಹಾದರಗಿತ್ತಿಗೆ ಹದಿನೆಂಟು ಹೆಸರು.
೩೩೮೮ ಹಾದರಗಿತ್ತಿಯ ಕಾಲು ಹಸೇ ಮೇಲೆ ನಿಲ್ಲದು.
೩೩೮೯ ಹಾದೀ ಜಗಳ ಹಣವಡ್ಡಕ್ಕೆ ಕೊಂಡು ಕೊಂಡರು.
೩೩೯೦ ಹಾರುವ ಕಾಗೆ ಹೋರ್‍ಯಾಡಲಿಕ್ಕೆ ಬಲ್ಲಿತೇ.
೩೩೯೧ ಹಾರುವ ಗುಬ್ಬಿಗೆ ಗೋಧೀಕಲ್ಲು ಕಟ್ಟಿದ ಹಾಗೆ.
೩೩೯೨ ಹಾರುವವನಿಗೆ ಆಳಾಗ ಬೇಡ, ಗಾಣಿಗನಿಗೆ ಯೆತ್ತಾಗ ಬೇಡ.
೩೩೯೩ ಹಾರುವಯ್ಯನ ಸಂಗ ಹಲವಂಗ. [ಡ್ಯಾಟಿ.
೩೩೯೪ ಹಾರುವರ ಮನೇಲಿ ಹರಿಸೇವೆಯಾದರೆ ಮೂಳನಾಯಿಗೆ ವೋ
೩೩೯೫ ಹಾಳೆ ಮೋಟು, ಗುದ್ದಲಿ ಬೊಡ್ಡು, ಗೈಯುವವನಿಗೆ ವೊಕ್ಕೈ.
೩೩೯೬ ಹಾಲ ಅಕ್ಕಿ ಆದರೆ ಹಾಲು ಕರದೀತೇ.
೩೩೯೭ ಹಾಲಿಗಿಂತ ಕೆನೆ ರುಚಿ.
೩೩೯೮ ಹಾಲಿದ್ದಾಗಲೇ ಹಬ್ಬ ಮಾಡು.
೩೩೯೯ ಹಾಲು ಕಂಡಲ್ಲಿ ಬೆಕ್ಕು ಕೂಳು ಕಂಡಲ್ಲಿ ನಾಯಿ.
೩೪೦೦ ಹಾವಡಿಗನಿಗೆ ಹಾವಿನಿಂದಲೇ ಮರಣ.
೩೪೦೧ ಹಾವಿಗೆ ಹಾಲೆರದರೆ ವಿಷ ಬಿಟ್ಟೀತೇ.

೩೪೦೨ ಹಾವಿನ ಕೂಡೆ ಕಪ್ಪೆಗೆ ಸರಸವೇ.

೩೪೦೩ ಹಾವು ಕಚ್ಚಿದ್ದಲ್ಲಿ ಹಳ್ಳೇ ಬಟ್ಟೆ ವೊರಸಿದರೆ ಹೋದೀತೇ.

೩೪೦೪ ಹಾವು ಕಚ್ಚಿ ಬರಿಬಾಯಿ.

೩೪೦೫ ಹಾವು ಕೊಂದು ಹದ್ದಿನ ಮುಂದೆ ಹಾಕಿದ ಹಾಗೆ.

೩೪೦೬ ಹಾವು ಮುಪ್ಪಾದರೆ ವಿಷ ಮುಪ್ಪೇ.

೩೪೦೭ ಹಾವು ಹಡದಮ್ಮ ಬೇಲಿ ಹೊಕ್ಕಳು.

೩೪೦೮ ಹಾಸಿಗೆ ಹಾಸಲಿಕ್ಕೆ ತಿಳ್ಯೇದವಳು ದೋಶೇ ಮಾಡ್ಯಾಳೇ.

೩೪೦೯ ಹಾಳತ ತಿಳಿಯದ ಕೆಲಸಕ್ಕೆ ವ್ಯಾಳಪ್ಪ ಯೇನು ಮಾಡ್ಯಾನು.

೩೪೧೦ ಹಾಳೂರಿಗೆ ಬೋಳು ಸುತ್ತಿಗೆ.

೩೪೧೧ ಹಿಂಗಾರ ಇಲ್ಲದೆ ಶೃಂಗಾರ ಆಗದೋ.

೩೪೧೨ ಹಿಂಡು ವೊಡದ ಆಕಳು ಕಂಡ ಕಡೆ.

೩೪೧೩ ಹಿಂಡೇ ಕೂಳು ಮುಂಚೆಗೆ ಆದೀತೇ.

೩೪೧೪ ಹಿಂದಕ್ಕೆ ಮುಂದಕ್ಕೆ ದಾಸಯ್ಯನಾದರೆ ತಿರುಮಂತ್ರಾ ಹೇಳ್ಯಾನು.

೩೪೧೫ ಹಿಂದೆ ಮರಿ, ಮುಂದೆ ಅರಿ.

೩೪೧೬ ಹಿಂದೆ ಬೈಯ ಬಾರದು, ಮುಂದೆ ಹೊಗಳ ಬಾರದು.

೩೪೧೭ ಹಿಗ್ಗಿದವ ಮುಗ್ಗ್ಯಾನು, ತಗ್ಗಿದವ ಜೈಸ್ಯಾನು.

೩೪೧೮ ಹಿಡಿದದ್ದು ತಪ್ಪಿತು, ಮೆಟ್ಟಿದ್ದು ಮುರೀತು.

೩೪೧೯ ಹಿಡಿ ತುಂಬ ಹಣ ಕೊಟ್ಟರೂ ನುಡಿ ಚನ್ನಾಗಿರ ಬೇಕು.

೩೪೨೦ ಹಿಡಿಯುವದಕ್ಕೆ ಪಟ್ಟಿಲ್ಲ, ನಿಲ್ಲುವದಕ್ಕೆ ಕೊನೆ ಇಲ್ಲ.

೩೪೨೧ ಹಿಡಿ ಹೆಬ್ಬಾರನ ಕಾಲು ಹಿಡಿದಷ್ಟು, ಗಾತ್ರ.

೩೪೨೨ ಹಿತ್ತಲ ಗಿಡ ಮದ್ದಲ್ಲ, ಮಕ್ಕಳ ಮಾತು ನಿಜವಲ್ಲ.

೩೪೨೩ ಹಿಮ್ಮಡಿ ಗೂಟ ಕಟ್ಟುವ ಸೂತ್ರ.

೩೪೨೪ ಹಿಮ್ಮೇಳ ಇದ್ದರೆ ಮುಮ್ಮೇಳ, ಇಲ್ಲದಿದ್ದರೆ ಸಮ್ಮೇಳ.

೩೪೨೫ ಹಿರಿಯಕ್ಕನ ಛಾಳಿ ಮನೇ ಮಕ್ಕಳಿಗೆಲ್ಲ.

೩೪೨೬ ಹೀಗೇ ಬಾಯಿ ಆಡಿಸುವವಳು ಅವಲಕ್ಕೀಕಾಳು ಕಂಡರೆ ಬಿಟ್ಟಾಳೇ.
೩೪೨೭ ಹೀನನ ಸಂಗ ಮಾನಿಗೆ ಆಗದು, ಮಾನೀ ಸಂಗ ಹೀನಗೆ ಆಗದು.
೩೪೨೮ ಹುಗ್ಗಿ ತಿಂದಾಕ್ಷಣ ಮಗ್ಗಿ ಬಂದ ಹಾಗಾಯಿತೇ.
೩೪೨೯ ಹುಚ್ಚಗೆ ನಚ್ಚ ಬಾರದು, ಪಚ್ಚಕ್ಕೆ ಕೊರತೆ ಬಾರದು.
೩೪೩೦ ಹುಚ್ಚಲ್ಲ ಬೆಪ್ಪಲ್ಲ, ಶಿವಲೀಲೆ.
೩೪೩೧ ಹುಚ್ಚು ಹೋಗದೆ ಮದಿವೆ ಆಗದು, ಮದಿವೆ ಆಗದೆ ಹುಚ್ಚು [ಹೋಗದು.
೩೪೩೨ ಹುಚ್ಚು ಮುಂಡೇ ಪ್ರಯಾಣ ಅವಲಕ್ಕೀ ಕೇಡು.
೩೪೩೩ ಹುಚ್ಚು ಹೋಯಿತು ವೊನಕೆ ತಾ ಅಂದ.
೩೪೩೪ ಹುಟ್ಟಿದಾಗ ಅಣ್ಣತಮ್ಮ, ಬೆಳದಾಗ ದಾಯಾದಿ.
೩೪೩೫ ಹುಟ್ಟು ಕುರುಡಗೆ ಸ್ವಪ್ನವಿಲ್ಲ, ಮುಟ್ಟು ತಿಳಿದವಗೆ ರೋಗವಿಲ್ಲ.
೩೪೩೬ ಹುಟ್ಟು ಕುರುಡ ಹಾಲು ತಿಳುಕೊಂಡ ಹಾಗೆ.
೩೪೩೭ ಹುಟ್ಟು ಕುರುಡ ಹಾಳು ಭಾವೀಲಿ ಬಿದ್ದ ಹಾಗೆ.
೩೪೩೮ ಹುಟ್ಟು ಕೋಲುಕಾರನದು, ಕಟ್ಟು ಸಾವಕಾರನದು.
೩೪೩೯ ಹುಟ್ಟು ಬಂದ ಬುದ್ಧಿ ಸುಟ್ಟಲ್ಲದೇ ಹೋಗದು.
೩೪೪೦ ಹುಡುಗ ಮಿಂಡನಲ್ಲ, ಗಿಡಗ ಪಕ್ಷಿಯಲ್ಲ.
೩೪೪೧ ಹುಣಸೆ ಮುಪ್ಪಾದರೆ ಹುಳಿ ಮುಪ್ಪೇ.
೩೪೪೨ ಹುಣ್ಣು ಮಾಯ ಬೇಕು, ಕಣ್ಣು ಬೆಳಗ ಬೇಕು.
೩೪೪೩ ಹುತ್ತ ಬಡಿದರೆ ಹಾವು ಸಾಯುವದೇ.
೩೪೪೪ ಹುಬ್ಬೇ ಮಳೆ ಅಬ್ಬೇ ಹಾಲು.
೩೪೪೫ ಹುರುಳಿ ತಿನ್ನುವವನಿಗೆ ಕಂಠ ಹಿಡಿಯುವವರು ಮೂರು ಮಂದಿ.
೩೪೪೬ ಹುರುಳೀ ಸಾರಿಗೆ ಹೋಗಿ ಕುದುರೇ ಕ್ರಯ ಕೇಳಿದ ಹಾಗೆ.
೩೪೪೭ ಹುಲೀ ಕೂಡೆ ನರಿಗೆ ಶೆಣಸಾಟವೇ.
೩೪೪೮ ಹುಲೀ ಬಣ್ಣಕ್ಕೆ ನರಿ ಮೈ ಸುಟ್ಟು ಕೊಂಡ ಹಾಗೆ.
೩೪೪೯ ಹುಲೀ ಮರಿ ಹುಲ್ಲು ಮೇದೀತೇ.

೩೪೫೦ ಹುಲ್ಲು ಉರಿ, ಕನಸಿನ ಸಿರಿ ನಿಲ್ಲದು.
೩೪೫೧ ಹುಲ್ಲೆ ಹಾರಿದ್ದಕ್ಕೂ ಹುಲಿ ಅಡಗಿದ್ದಕ್ಕೂ ತಾಳಿಕೆ ಅಲ್ಲ.
೩೪೫೨ ಹುಸಿ ಹೇಳಿದರೂ ಹಸನಾಗಿರ ಬೇಕು.
೩೪೫೩ ಹುಳ ತಿಂದ ಅಕ್ಕಿ ಆದರೆ ಮಳೆಗೆ ನೆನಿಯದೇ.
೩೪೫೪ ಹುಳೀಸಾರು ಮಾಡದವ ನಳಪಾಕ ಮಾಡ್ಯಾನೇ.
೩೪೫೫ ಹೂಡಲಿಕ್ಕೆ ತಿಳೇದಿದ್ದರೆ ನೋಡಲಿಕ್ಕೂ ತಿಳೇದೇ.
೩೪೫೬ ಹೂಡಿದರೆ ವೊಲೆ, ಮಾಡಿದರೆ ಮನೆ, ಕೂಡಿದರೆ ಗಂಡ.
೩೪೫೭ ಹೂ ಮಾರಿದ ಊರಲ್ಲಿ ಹುರಿ ಮಾರ ಬಾರದು.
೩೪೫೮ ಹೂವಿಗೆ ಬಡತನವಾದರೆ ಹೂಸಿಗೆ ಬಡತನವಲ್ಲ.
೩೪೫೯ ಹೂವಿನಿಂದ ನಾರು ತಲೆಗೇರುತ್ತದೆ.
೩೪೬೦ ಹೂಸದಿದ್ದರೆ ಹೂ ಕೊಟ್ಟಷ್ಟು ಫಲ.
೩೪೬೧ ಹೂಸಿದಲ್ಲದೇ ನಾರದು.
೩೪೬೨ ಹೂಸಿದವಳ್ಯಾರಂದರೆ ಮೂಸಿದ ಬಟ್ಟಿಯವಳೇ.
೩೪೬೩ ಹೆಂಡತಿ ಹೆಗ್ಗಡತಿಯಾದರೆ ಗಂಡ ಮೂಳನಾಯಿಗಿಂತ ಕಡೆ.
೩೪೬೪ ಹೆಂಡ ಮಂಡೆಗೆ ಯೇರಿದ್ದು ಕುಂಡೆ ಬಡಕೊಂಡರೆ ಇಳಿದೀತೇ.
೩೪೬೫ ಹೆಗ್ಗಣ ಪರದೇಶಕ್ಕೆ ಹೋದರೂ ನೆಲಾ ಕೊರೋದು ಬಿಡದು.
೩೪೬೬ ಹೆಗ್ಗೊಂಬಾದರೂ ನುಗ್ಗೇಮರದ್ದಾಗದು.
೩೪೬೭ ಹೆಚ್ಚಿದ ಪಲ್ಯಕ್ಕೆ ನುಚ್ಚಿನ ಅನ್ನವೇ.
೩೪೬೮ ಹೆಡ್ಡನಾದರೂ ದೊಡ್ಡವನೇ ಲೇಸು.
೩೪೬೯ ಹೆಡ್ಡಾಳಾದರೂ ವೊಡ್ಡಾಳಾಗಿರ ಬೇಕು.
೩೪೭೦ ಹೆಣ ಸುಟ್ಟರೂ ರುಣ ಸುಡಲಿಲ್ಲ.
೩೪೭೧ ಹೆಣ ಹೊರುವವನಿಗೆ ರೋಮ ಬಾದಿಯೇ.
೩೪೭೨ ಹೆಣ್ಣಾದರೇನು, ಮಣ್ಣಾದರೇನು, ಪುಣ್ಯವಿನಹಾ ಸಿಕ್ಕದು.
೩೪೭೩ ಹೆಣ್ಣು ಕೊಟ್ಟೆಯೋ ಬೆನ್ನು ಕೊಟ್ಟೆಯೋ.

೩೪೭೪ ಹೆಣ್ಣು ತಂದಿಯೋ ಮಣ್ಣು ತಂದಿಯೋ.
೩೪೭೫ ಹೆಣ್ಣು ಪೊಳ್ಳೇದೇ ಸರಿ, ಕಣ್ಣು ಮಾತ್ರ ಕಾಣುವದಿಲ್ಲ.
೩೪೭೬ ಹೆಣ್ಣು ಹೆತ್ತು ತಿಳೀ ಬೇಕು, ಗಂಡು ತೆತ್ತು ತಿಳೀ ಬೇಕು.
೩೪೭೭ ಹೆತ್ತ ತಾಯಿಗಾನ ತಿಂಬುವವಳು ಅತ್ತೆಗೆ ಬಿಟ್ಟಾಳೇ.
೩೪೭೮ ಹೆತ್ತಯ್ಯಗೆ ಅರಿಯದವ ಮುತ್ತಯ್ಯಗೆ ಬಲ್ಲನೇ.
೩೪೭೯ ಹೆತ್ತವರಿಗೆ ಮಕ್ಕಳು, ಬಿತ್ತಿದವರಿಗೆ ಬೆಳೆ, ಯೆತ್ತಿದಕ್ಕನ ಕೈ ಬರಿಗೈ.
೩೪೮೦ ಹೆತ್ತವರಿಗೆ ಹೆಗ್ಗಣ ಮುದ್ದು, ಕೂಡಿದವರಿಗೆ ಕೋಡಗ ಮುದ್ದು.
೩೪೮೧ ಹೆಪ್ಪು ಹಾಕಲಿಕ್ಕೆ ತಿಳಿಯದವಳು ಮೊಸರು ಕಡದಾಳೇ.
೩೪೮೨ ಹೆಮ್ಮೆಯವನಿಗೆ ಪೊಮ್ಮಾನಕ್ಕಿಯೂ ದೊರಕದು.
೩೪೮೩ ಹೆರರ ಬಾಯಲ್ಲಿಕ್ಕುವದ ತನ್ನವರ ಕುಂಡೇಲಿಕ್ಕು.
೩೪೮೪ ಹೆರಲಾರದವಳು ಹೆತ್ತರೆ ಮನೆ ಯೆಲ್ಲ ಹೇಲು.
೩೪೮೫ ಹೆರೇಗೆ ಹೆದರಿದವ ಹಾವಿಗೆ ಹೆದರನೇ.
೩೪೮೬ ಹೆರೇಲಿಕ್ಕಿಲ್ಲವೆಂದು ಗೆರಟೇ ಹೆರದ ಹಾಗೆ.
೩೪೮೭ ಹೆಸರು ಕ್ಷೀರಸಾಗರಭಟ್ಟ, ಮಜ್ಜಿಗೇ ನೀರಿಗೆ ತತ್ವಾರ.
೩೪೮೮ ಹೇಡಿ ಯುದ್ಧಕ್ಕೆ ಹೋಗ, ಪೋಡಿ ಕೆಲಸಕ್ಕೆ ಹೋಗ.
೩೪೮೯ ಹೇತು ಇಲ್ಲದೆ ಮಾತು ಬಾರದು.
೩೪೯೦ ಹೇನು ಕಕ್ಕುವದಕ್ಕೆ ಅಂಬು ಬೇಕೇ.
೩೪೯೧ ಹೇನು ಬೆಳದರೆ ಆನೆ ಆದೀತೇ.
೩೪೯೨ ಹೇಮವಿಲ್ಲದಿದ್ದರೆ ಕಾಮಕ್ಕೆ ಕಡಿಮೆಯೇ.
೩೪೯೩ ಹೇರು ನುಂಗುವವ ಶೇರು ಬಿಟ್ಟಾನೇ.
೩೪೯೪ ಹೇರು ಪೊಪ್ಪಿಸಿದ ಮೇಲೆ ಸುಂಕ ಕೇಳುವದೇನು.
೩೪೯೫ ಹೇಲು ಅಲ್ಲ, ಭಟ್ಟ ಹೇತದ್ದು.
೩೪೯೬ ಹೇಲು ಬಂದರೆ ಹುಲಿಗೆ ಹೆದರ.
೩೪೯೭ ಹೇಲೋಕೆ ಕೂತಲ್ಲಿ ಹಂದೀ ಕಾಟ.

೩೪೯೮ ಹೇಳಿ ಕೊಟ್ಟ ಬುದ್ಧಿ ಕಟ್ಟಿ ಕೊಟ್ಟ ಭುತ್ತಿ ಯೆಲ್ಲಿ ತನಕ ಬರುವದು.
೩೪೯೯ ಹೇಳಿ ಕೊಟ್ಟರೆ ಬಾರದ ವಿದ್ಯೆ ಕೇಳಿ ಕಲಿತಾನೇ. [ತಿನ್ನುತ್ತಾನೆ.
೩೫೦೦ ಹೇಳಿದರೆ ತಾಯಿ ಸಾಯುತ್ತಾಳೆ, ಹೇಳದಿದ್ದರೆ ತಂದೆ ಸಾಯಿ
೩೫೦೧ ಹೇಳುವವರಿಗೆ ಸುದ್ದಿ, ಕೇಳುವವರಿಗೆ ಬುದ್ಧಿ.
೩೫೦೨ ಹೇಳುವವರು ಹೆಡ್ಡರಾದರೆ ಕೇಳುವವರಿಗೆ ಮತಿ ಇಲ್ಲವೇ.
೩೫೦೩ ಹೊಂಗೆಜ್ಜೆ ಮಂಗಕ್ಕೆ ಯಾಕ್ಕೆ
೩೫೦೪ ಹೊಕ್ಕ ಮನೆ ಹಾಳು, ಇದ್ದ ಮನೆ ಬೋಳು.
೩೫೦೫ ಹೊಗಳಿದಷ್ಟೂ ಮಗಳು ಜಗಳಾಡೋದು ಬಿಡುವದಿಲ್ಲ.
೩೫೦೬ ಹೊಗೆ ಇದ್ದಲ್ಲಿ ಬೆಂಕಿ, ತಗ್ಗು ಇದ್ದಲ್ಲಿ ಥಳಿ.
೩೫೦೭ ಹೊಟ್ಟು ಕುಟ್ಟಿ ಕೈಯೆಲ್ಲ ಗುಳ್ಳೆ.
೩೫೦೮ ಹೊಟ್ಟೆಗಿಲ್ಲದ ಶ್ಯಾನಭಾಗ ಹಳೇ ಕಡತ ಹುಡುಕಿದ ಹಾಗೆ.
೩೫೦೯ ಹೊಟ್ಟೆಗಿಲ್ಲದ್ದೇ ಯೇಕಾದಶಿ.
೩೫೧೦ ಹೊಟ್ಟೇ ನಿನ್ನಿಂದ ಕೆಟ್ಟೆ.
೩೫೧೧ ಹೊತ್ತು ಮೀರಿದರೆ ತೊತ್ತು ಹೆತ್ತವ್ವಳಾದಾಳೇ. [ಮುಚ್ಚಿತು.
೩೫೧೨ ಹೊನ್ನಿದ್ದಮ್ಮನ ತೊನ್ನು ಮುಚ್ಚಿತು, ಮಕ್ಕಳಿದ್ದಮ್ಮನ ಹಾದರ
೩೫೧೩ ಹೊನ್ನು ಉಳ್ಳವನಿಗೆ ಮಾನ ಉಂಟು. [ಅಂದ ಹಾಗೆ.
೩೫೧೪ ಹೊರಗೆ ಹೋಗುವ ಮಾರಿ ನನ್ನ ಮನೇ ಹೊಕ್ಕು ಹೋಗು
೩೫೧೫ ಹೊಲದ ಹತ್ತಿ ಹೊಲದಲ್ಲೇ ನಿನಗೆ ಮೊಳ ಉದ್ದ ನನಗೆ ಮಾರು ದ್ದ ಅಂದ ಹಾಗೆ.
೩೫೧೬ ಹೊಲಾ ಬಿತ್ತಿ ನೋಡು, ನೆಲಾ ಸಾರಿಸಿ ನೋಡು.
೩೫೧೭ ಹೊಲೆಯನ ಪಾಯಸ ಹಾರುವನಿಗೆ ಯಾಕೆ.
೩೫೧೮ ಹೊಸ ಅಗಸ ಗೋಣೀ ಹೊಗದ.
೩೫೧೯ ಹೊಸತು ಮೈಯಲ್ಲಿ, ಹಳತು ಹಗ್ಗದಲ್ಲಿ. [ಹಾಗೆ.
೩೫೨೦ ಹೊಸ ಮನೆಗೆ ಹೋಗುತ್ತಾ ಕಾಗೆ ಕೊಂಕುಳಲ್ಲಿ ಇಟ್ಟು ಕೊಂಡ

೩೫೨೧ ಹೊಸ ವೈದ್ಯನಿಗಿಂತ ಹಳೇ ರೋಗಿ ವಾಸಿ.

೩೫೨೨ ಹೊಸ್ತಿಲು ದಾಟುವಾಗಲೇ ಹೊಸ ಅತ್ತೇನ ತರಬೇಕಂದ ಹಾಗೆ.

೩೫೨೩ ಹೊಸ್ತಿನಲ್ಲಿ ಅಗಸ ಗೋಣೀ ವೊಗದ, ಹಳದಾದರೆ ಬಟ್ಟೆ ವೊಗಿಯುವದೇ ಪ್ರಯಾಸ.

೩೫೨೪ ಹೊಳೆಗೆ ನೆನೆಯದ ಕಲ್ಲು ಮಳೆಗೆ ನೆನದೀತೇ.

೩೫೨೫ ಹೊಳೇ ನೀರಿಗೆ ದೊಣ್ಣಪ್ಪನಾಯಕನ ಅಪ್ಪಣೆಯೇ.

೩೫೨೬ ಹೊಳೇ ಮೂಗಾವುದವನ್ನ ಕೆರಾಕಳಚುವರುಂಟೇ.

೩೫೨೭ ಹೋಕಿಲ್ಲದ ಕೆಲಸ ನಾಕದಲ್ಲಿಯೂ ಬೇಕು.

೩೫೨೮ ಹೋಗದಿದ್ದ ಊರಿಗೆ ಆಗದಿದ್ದ ಚೀಟು.

೩೫೨೯ ಹೋಗು ಅಂಬೋದಿಲ್ಲ, ಹೊಗೆ ಹಾಕುತ್ತೇನೆ.

೩೫೩೦ ಹೋದ ಪುಟ್ಟಾ, ಬಂದ ಪುಟ್ಟಾ.

೩೫೩೧ ಹೋದರೆ ವೊಂದು ಕಲ್ಲು, ಬಂದರೆ ವೊಂದು ಹಣ್ಣು.

೩೫೩೨ ಹೋಬೆಯಾ ಪೀಡೆ ಅಂದರೆ ಬಂದೆ ಬೆಳಕಿನ ಕಂಡಿಯಿಂದ.

೩೫೩೩ ಹೋದೊಡವೆ ಹೊರಡದು.

೩೫೩೪ ಹೋಮಕ್ಕೆ ಹೋದಲ್ಲಿಯೂ ನಾಮ ಹಚ್ಚಿ ಕೊಳ್ಳ ಬೇಕೋ.

೩೫೩೫ ಹೋಮ ತಿಳೇದಿದ್ದರೆ ಹೋಳಿಗೇ ಊಟಾ ಉಣ್ಣಲಿಕ್ಕೆ ತಿಳಿಯದೇ

೩೫೩೬ ಹೋರಿ ನಡಿಯದಿದ್ದರೆ ದಾರಿ ಉದ್ದ ಅಂದ ಹಾಗೆ.

೩೫೩೭ ಹೋರುವ ಮುಂಡೆ ಹೂರಿಗೆ ಬಿಟ್ಟಾಳೇ.

೩೫೩೮ ಹೋರುವ ಹೆಂಡತಿ ನಾರುವ ನೀರು ತ್ಯಜಿಸು.

೩೫೩೯ ಹೋಳಿಕೆಯೂ ನಾಲಿಗೆಯೂ ಸಮನಾಗಿರ ಬೇಕು.

೩೫೪೦ ಹೋಳಿ ಆಡದಿದ್ದರೆ ಹೋಳಿಗೇ ತಿನ್ನ ಬಾರದೇ.

೩೫೪೧ ಹೌದು ಬಸವಾ ಹೌದು, ಅಲ್ಲ ಬಸವಾ ಅಲ್ಲ.

೩೫೪೨ ಕ್ಷಯ ರೋಗವಾಶಿ ಆಗೋದು ಕಷ್ಟ, ಬರದಲ್ಲಿ ಅನ್ನ ದೊರೆಯುವದು ಕಷ್ಟ.

೩೫೪೩ ಕ್ಷಾಮ ಕಾಲಕ್ಕೆ ನಾಮ ಮಾತ್ರ ಲಾಭ.

೩೫೪೪ ಕ್ಷುದ್ರ ಕೇಳುವವನು ಶೂದ್ರನಿಂದ ಕಡೆ.

೩೫೪೫ ಕ್ಷೇಮವಿಲ್ಲದಿದ್ದರೂ ಹೇಮದಾಶೆ ಬಿಡ.

೩೫೪೬ ಕ್ಷೌರ ಕತ್ತಿ ಚಲೋದು, ಯಾಕೆ ಅಳುತ್ತೀರಮ್ಮ.

೩೫೪೭ ಕ್ಷೌರಕ್ಕೆ ಕೂತಲ್ಲಿ ಶೀನು ಬಂದ ಹಾಗೆ.



ಸಮಾಪ್ತಿ.

# ಜರ್ಮನ್ ಮಿಶ್ಯನ್ ಛಾಪಖಾನೆಯಲ್ಲಿರುವ ಮಾರಾಟದ ಪುಸ್ತಕಗಳು.

---

## ೧. ಕಂನಡ ಪುಸ್ತಕಗಳು.

| | ರೂ. | ಆ. | ಪೈ. |
|---|---|---|---|
| ಅಕ್ಷರಮಾಲೆ. . . . . . . . . . . . . . . . . . . . | ೦ | ೧ | ೦ |
| ಗಣಿತವಿದ್ಯೆ, ಮೊದಲನೆ ಭಾಗ. . . . . . . . . . . | ೦ | ೪ | ೦ |
| ಪೈಮಾಯಸಿ. . . . . . . . . . . . . . . . . . . . | ೦ | ೨ | ೦ |
| ಗ್ರಾಮ ಮುನಶೀಫರ ಕಾನೂನು. . . . . . . . . . . . | ೦ | ೧ | ೬ |
| ಭೂತಾಳಪಾಂಡ್ಯನ ಕಟ್ಟುಕಟ್ಟಳೆಗಳು. . . . . . . . . | ೦ | ೩ | ೦ |
| ೧೮೫೫ರಿಂದ ೧೮೫೭ರ ವರೆಗೆ ಇರುವ ಪಂಚಾಂಗಗಳು | ೦ | ೧ | ೦ |
| ಪ್ರತಿ ೧ಕ್ಕೆ ೧೮೫೯ನೆ ವರೆಗೆ ಇರುವ ಪಂಚಾಂಗಕ್ಕೆ. . . | ೦ | ೩ | ೦ |
| ಈರಾರುಪತ್ರಿಕೆ. . . . . . . . . . . . . . . . . . . | ೦ | ೦ | ೬ |
| ಚಿಕ್ಕ ಹೆನ್ರಿ. . . . . . . . . . . . . . . . . . . . | ೦ | ೦ | ೩ |
| ಹೃದಯದರ್ಪಣ. . . . . . . . . . . . . . . . . . . | ೦ | ೧ | ೦ |
| ಬಾಲಾಸುಂದರೀಠಾಕೂರ್ . . . . . . . . . . . . . . . | ೦ | ೦ | ೪ |

## ೨. ಇಂಗ್ಲಿಷ್ ಪುಸ್ತಕಗಳು.

| | | | |
|---|---|---|---|
| ಸದರದಾಲತ ಕೋರ್ಟಿನ ಸರ್ಕ್ಯುಲಾರ ಹುಕುಂಗಳು. . . | ೦ | ೬ | ೦ |
| ಪೈಮಾಯಸಿ. . . . . . . . . . . . . . . . . . . . | ೦ | ೩ | ೦ |
| ಹೃದಯದರ್ಪಣ. . . . . . . . . . . . . . . . . . . | ೦ | ೬ | ೦ |

## ೩. ಕಂನಡ ಇಂಗ್ಲಿಷ್ ಪುಸ್ತಕವು.

| | | | |
|---|---|---|---|
| ರಾಜೇಂದ್ರನಾಮೆ (ಕೊಡಗಿನ ಚರಿತ್ರ). . . . . . . . . | ೧ | ೮ | ೦ |

---

| | | | |
|---|---|---|---|
| ಹಿಂದುಸ್ಥಾನದ ನಕ್ಷೆ. . . . . . . . . . . . . . . . | ೦ | ೧ | ೦ |
| ಬಣ್ಣ ಹಾಕಿದ್ದಕ್ಕೆ „. . . . . . . . . . . . . . . . | ೦ | ೪ | ೦ |

ಬುದ್ಧಿಯು ಕರೆಯುತ್ತಾಳಲ್ಲವೋ? ತಿಳುವಿಕೆಯು ಶಬ್ದವನ್ನೆತ್ತುತ್ತಾಳಲ್ಲವೋ? ಉನ್ನತಾಗ್ರಗಳಲ್ಲಿಯೂ ಮಾರ್ಗದ ಬಳಿಯಲ್ಲಿಯೂ ಮನೆಯ ಮುಂದೆಯೂ ಅಡ್ಡ ಹಾದಿಗಳಲ್ಲಿಯೂ ನಿಲ್ಲುತ್ತಾಳೆ — ದ್ವಾರಗಳ ಕಡೆಯಲ್ಲಿಯೂ ಪಟ್ಟಣದ ಬಾಯಿಯಲ್ಲಿಯೂ ಬಾಗಲುಗಳ ಪ್ರವೇಶದಲ್ಲಿಯೂ ಕೂಗುತ್ತಾಳೆ — ಪುರುಷರೇ ನಿಮಗೆ ಕರೆಯುತ್ತೇನೆ ನನ್ನ ಶಬ್ದವು ಮನುಷ್ಯರ ಮಕ್ಕಳಿಗೆ ಶೇರಲಿ. ಮೂಢರೇ ಯುಕ್ತಿಯನ್ನು ಕಲಿತು ಕೊಳ್ಳಿರಿ. ಹುಚ್ಚರೇ ಹೃದಯದಲ್ಲಿ ಗ್ರಹಿಕೆಯನ್ನು ಹೊಂದಿರಿ. ಕೇಳಿರಿ. ಯಾಕಂದರೆ ಪ್ರಕಟವಾದವುಗಳನ್ನು ನುಡಿಯುವೆನು ನೀಟಾದವುಗಳಿಗಾಗಿ ನನ್ನ ತುಟಿಗಳನ್ನು ಬಿಚ್ಚುವೆನು.

Printed by G. Plebst, German Mission Press, Mangalore.

# ಗಾದೆಗಳು.

---

ಅ ಆ ಬಾರದಿದ್ದರೆ ಅಮರವಾದರೂ ಹೇಳು.
೨ ಅಂಕಣದ ಮನೆಯಾದರೆ ಕೊಂಕಣಿಗನಿಗೆ ಆಗದೇ.
೩ ಅಂಕೆ ಇಲ್ಲದ ಕಪಿ ಲಂಕೇ ಸುಟ್ಟಿತು.
೪ ಅಂಕೆ ತಿಳಿಯದವ ಮಂಕಗಿಂತ ಕಡೆ.
೫ ಅಂಗಡಿ ಇದ್ದರೆ ಸಾಲದು, ಮುಂಗಡ ಬೇಕು.
೬ ಅಂಗಡೀ ಮಾರಿ ಗೊಂಗಡೀ ಹೊದ್ದ.
೭ ಅಂಗಡಿಯಲ್ಲಿ ಜುಂಗಡಿ ಶಿಕ್ಕದೇ.
೮ ಅಂಗನೆ ಬರುವಾಗ ಅಂಗೀ ತೊಡ ಬೇಡವೇ.
೯ ಅಂಗರಕ್ಷೆ ಇಲ್ಲದವನಿಗೆ ಭಂಗಾರವ್ಯಾಕೆ.
೧೦ ಅಂಗಲಾಗಿ ಬಿತ್ತಿದ್ದು ಅಗಲವಾಗಿ ಯೇಳುವದು.
೧೧ ಅಂಗವಸ್ತ್ರ ಇಲ್ಲದಿದ್ದರೆ ಅಂಗಾರವಿರ ಬಾರದೇ.
೧೨ ಅಂಗಳದಲ್ಲಿ ಹೇತು ಮಂಗಳ ಕಷ್ಟ.
೧೩ ಅಂಗಾಲಿಗೆ ತ್ರಾಣವಿದ್ದರೆ ಬಂಗಾಳಕ್ಕೆ ಹೋಗ ಬಹುದು.
೧೪ ಅಂಗೀ ಕೊಟ್ಟು ಭಂಗಿಸೇದಿ ಮಂಗನಾದ.
೧೫ ಅಂಗಿಗೆ ಇಲ್ಲದಿದ್ದರೆ ನುಂಗಲಿಕ್ಕೆ ಬೇಡವೇ.
೧೬ ಅಂಗುಷ್ಟ ಬಾತರೆ ಪರ್ವತವಾದೀತೇ.
೧೭ ಅಂಗೈ ತೋರಿಸಿ ಅವಲಕ್ಷಣ ಅನ್ನಿಸಿ ಕೊಂಡ.



